# ಪಕ್ಷ್ಮಲಾಕ್ಷಿ

ಅಮರವಾಣಿ

ಪ್ರಕಾಶಕರು :
ಪ್ರಬೋಧ ಪುಸ್ತಕ ಮಾಲೆ
ಬೆಂಗಳೂರು

1947

# ಮುನ್ನುಡಿ

"ಪಕ್ಷ್ಮಲಾಕ್ಷಿ" ಎಂಬ ಈ ಪುಟ್ಟ ಕಾವ್ಯಕ್ಕೆ ಮುನ್ನುಡಿ ಬರೆಯುವುದು ನನಗೆ ಬಹಳ ಸಂತೋಷದ ಕೆಲಸ. ಇದನ್ನು ಬರೆದಿರುವ ಆಸ್ಥಾನ ವಿದ್ವಾನ್ ಶ್ರೀಮಾನ್ ಎಂ. ಜಿ. ನಂಜುಂಡಾರಾಧ್ಯರಿಗೂ ನನಗೂ ಅನೇಕ ವರ್ಷಗಳಿಂದ ಸ್ನೇಹವಿದೆ. ಅವರು ಕೈಲಾಸವಾಸಿ ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಯವರ ಜೀವನಚರಿತ್ರೆ ಮುಂತಾದ ಕೆಲವು ಗ್ರಂಥಗಳನ್ನು ಬರೆದು ಖ್ಯಾತಿ ಗಳಿಸಿದ್ದಾರೆ. ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಅವರನ್ನು ಆಸ್ಥಾನ ವಿದ್ವಾಂಸರನ್ನಾಗಿ ನೇಮಿಸಿ ಕೃಪೆ ತೋರಿದ್ದಾರೆ.

ಶ್ರೀ ರಾಮಚಂದ್ರನು ರಾವಣನನ್ನು ಕೊಂದು ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿದ ತರುವಾಯ ಪುಷ್ಪಕವಿಮಾನದ ಮೇಲೆ ಲಂಕಾನಗರದಿಂದ ಅಯೋಧ್ಯೆಗೆ ಪ್ರಯಾಣ ಮಾಡಿದಾಗ ಸೀತಾದೇವಿಗೆ ದಾರಿಯುದ್ದಕ್ಕೂ ಪ್ರಕೃತಿ ಸೌಂದರ್ಯವನ್ನು ವಿವರಿಸುವುದು ಈ ಕವಿತೆಯ ವಿಷಯ. ಶ್ರೀ|| ಎಂ. ಜಿ. ನಂಜುಂಡಾರಾಧ್ಯರು ಸರಳವಾದ ಶೈಲಿಯಲ್ಲಿ ಎಲ್ಲರಿಗೂ ಅರ್ಥವಾಗುವ ತಿಳಿಗನ್ನಡದಲ್ಲಿ ಸ್ವಾರಸ್ಯವಾಗಿ ಪದ್ಯಗಳನ್ನು ಬರೆದಿದ್ದಾರೆ. ನಮ್ಮ ನನ್ನಿಯ ನಾಡಾದ 'ಕಂನಾಡಿ'ನ ವರ್ಣನೆಯು ಹೃದಯಂಗಮವಾಗಿದೆ.

"ಕೊನೆಯುಗುರು ಸೋಂಕಿದೊಡೆ ರಸವೊಸರಿ ಪರಿಯುತಿಹ
ರಸಬಾಳೆ ಕಬ್ಬಿನಾ ಬೆಳೆಯ ನೋಡು
ತೆಳುಸಿಪ್ಪೆಯೊಳು ಹುದುಗಿ ಪೊಳೆವಮೃತ ಗಟ್ಟಿಯೆನೆ
ರಸಬಾಳೆ ಗೊನೆಸಾಲು ಕಾಣ್ಬುದಲ್ಲಿ"

ಎಂಬ ಕಬ್ಬಿನ ವರ್ಣನೆಯೂ,

"ಕುಡಿಯೊಡೆದು ಭಕ್ತಿಲತೆ ಸುಳಿಗಾಳಿಗಲುಗುವೊಲು
ನಸುಮುಚ್ಚಿ ಕಂಗಳನು ನಲ್ಮೆಯಿಂದೆ
ತಲೆದೂಗಿ ಮನ್ನಿಸುತೆ ಬಾನ್ದೇರು ಬೇಗದಿಂ
ಮುನ್ನಡೆಯೆ ಮತ್ತಿನನ ದಿಟ್ಟಿಸಿದನು"

ಎಂಬ ಶರಭಂಗಮುನಿವರನ ವರ್ಣನೆಯೂ, ಮತ್ತು

"ಚಾಚಿ ನೀಳ್ದೋಳುಗಳ ಭೂವಧುವನೆದೆಗವಚಿ
ಮುದ್ದಿಸುವ ನಲ್ಲನೊಲು ಮುಗಿಲಮುಟ್ಟಿ
ಕಾಂಬುದದೊ ! ದೂರದಲಿ ಗೌರಿಗುರು ಶಿಖರಮದು
ಈ ನಾಡ ಸ್ಫಟಿಕಮಣಿಮುಕುಟದಂತೆ"

ಎಂಬ ಗೌರೀಗುರುವಾದ ಹಿಮವತ್ಪರ್ವತ ಮುಂತಾದ ವರ್ಣನೆಗಳು ಚ
ಚೆನ್ನಾಗಿವೆ. ಅತ್ತೆಯರು,

"ಪತಿಭಕ್ತಿ ವ್ರತಖಡ್ಗಧಾರೆಯಿಂ ಖಳನಳಿಯೆ
ಸತಿಕುಲದ ಚಿರಕೀರ್ತಿ ಬೆಳಗಿಸಿರುವೆ"

ಎಂದು ಹೇಳಿ ಸೀತೆಯನ್ನು ಬಿಗಿಯಪ್ಪಿ ಕಂಬನಿಯನ್ನೊರಸಿ ನಲಿದುದ
ಸೀತಾದೇವಿಯು ಲಕ್ಷ್ಮಣನ ಮಡದಿಯಾದ ಊರ್ಮಿಳಾದೇವಿಯನ್ನು ತಕ್

"ಪದಿನಾಲ್ಕು ಬರಿಸಗಳು ಪತಿಭಕ್ತಿಯೋಗದಲಿ
ತನುತೆತ್ತ ಚಿರತಪಸ್ವಿನಿಯು ನೀನು
ನಿನ್ನ ಪುಣ್ಯದ ಬಲದೆ ನನ್ನ ಬಂಧವಿಮುಕ್ತಿ
ನಿನ್ನ ಸಿದ್ಧಿಯೊಳಾನು ಶುದ್ಧಳಾದೆ"

ಎಂಬುದನ್ನೂ ಕೇಳಿ ಸಹೃದಯರ ಮನಸ್ಸು ನಲಿಯುವುದು.

ಶ್ರೀಮಾನ್ ಆರಾಧ್ಯರು ಇನ್ನೂ ಅನೇಕ ಕವಿತೆಗಳನ್ನು ಬ
ಇತೋಪ್ಯಧಿಕವಾಗಿ ಸಾಹಿತ್ಯಸೇವೆ ಮಾಡಲೆಂದು ಹೃತ್ಪೂರ್ವಕ
ಹಾರೈಸುತ್ತೇನೆ.

ಬೆಂಗಳೂರು
ತಾ|| ೮-೩-೧೯೪೭

ಸಿ. ಕೆ. ವೆಂಕಟರಾಮಯ್ಯ.

# ನನ್ನ ನುಡಿ

ಕಾಳಿದಾಸನ ಕಾವ್ಯಾಭ್ಯಾಸದ ಹೊಂಬಿಸಿಲು ನನ್ನ ಮನಸ್ಸಿನ ಮೇಲೆ ಬಿಂಬಿಸಿ ಕಾವ್ಯಾನುರಾಗ ಕುಡಿಯಿಟ್ಟಿತು. ಪುರಾಣ ರಾಮಾಯಣದ ಭರತ ಖಂಡದ ದೃಶ್ಯ ಕಣ್ಣ ಮುಂದೆ ಕಂಗೊಳಿಸಿತು. ರಾಘವನ ಅಂದಿನ ನಚ್ಚಿನ ನಾಡು ಕಂನಾಡಿನ ಚಿರನೂತನ ಪ್ರಕೃತಿಸೌಂದರ್ಯ, ಅವನ ದುಃಖ ಸಾಗರಕ್ಕೆ ಸ್ನೇಹದ ಸೇತುವೆ ಕೋದು ನಲ್ಮೆಯ ನೆಲೆಗಾಣಿಸಿದ ಕಂನಾಡಿಗರ ಹೃದಯದೌದಾರ್ಯಗಳು ಮನಮಿಡಿದು ನುಡಿಸಿದವು. ಕೃತಿ ಕಿರಿದು, ಬಯಕೆ ಹಿರಿದು.

ಇಲ್ಲಿ ವರ್ಣಿತವಾಗಿರುವ ಕಂನಾಡು ಗೋದೆ ಕಾವೇರಿಯರ ನಡುವಿನ ಅಂಗೈಯಗಲದ ಹೊಲಬಲ್ಲ. ಅದು " ಕನ್ಯಾಕುಮಾರಿಯಿಂ ವಿಂಧ್ಯೆವರೆಗೆ " ಹಬ್ಬಿದ್ದ ಹೆಬ್ಬಯಲು. ಶ್ರೀರಾಮನು ದಂಡಕವನ ಪ್ರವೇಶಿಸಿದಾಗ ದಕ್ಷಿಣ ಭಾರತದಲ್ಲಿದ್ದುದೊಂದೇ ಒಂದು ಪ್ರಬಲ ಚಕ್ರಾಧಿಪತ್ಯ. ವಾಲಿ–ಸುಗ್ರೀವರ ಸಾಮ್ರಾಜ್ಯ. ಮೊನ್ನಿನವರೆಗಿನ ಕರ್ಣಾಟ ರಾಜಧಾನಿಯೆನಿಸಿದ್ದ ಹಂಪೆ (ಕಿಷ್ಕಿಂಧೆ) ಅಂದಿನ ರಾಜಧಾನಿ. ಈ ನಾಡಿನ ಜನತೆಯ ಉಚ್ಚ ಸಂಸ್ಕೃತಿಗೆ ಆದಿಕಾವ್ಯ ನಿದರ್ಶನ. ಪರದಾರಾಪಹಾರವನ್ನು ಪರಮಪಾತಕವೆಂದು ಬಗೆದು ಅಸಹಾಯರಿಗೆ ನೆರವಾಗುವುದು ಅವರ ಆದರ್ಶ. " ಕಲಿತನದೆ ಕಾಂತಿಯಲಿ ಚಾಗಭೋಗಗಳಲ್ಲಿ ಯೋಗದಲ್ಲಿ " ಅಗ್ರಗಾಮಿಗಳಾದ ಒಂದು ಜನಾಂಗವನ್ನು ಕಪಿಗಳೆಂದು ಕರೆದುದು, ಬಗೆದುದು ನಮ್ಮ ದೌರ್ಭಾಗ್ಯ.

ಕನ್ನಡಿಗರ ಎದೆಯೊಲವಿನಲ್ಲಿ ನಲಿದ ರಾಘವನು ಹಲವು ದಿನ ಅನೇಕ ಕಡೆ ಸಂಚರಿಸಿದ ನೆಲೆಗಳ ಐತಿಹ್ಯಗಳಿಂದಿಗೂ ಅಲ್ಲಲ್ಲಿ ದೊರೆಯುತ್ತವೆ. ಈ ದೃಷ್ಟಿಯಿಂದ ಈ ಕೃತಿ ರೂಪುಗೊಂಡಿದೆ.

ಆದಿಕವಿಯ ಮಹಾಕಾವ್ಯದ ಪರಿಮಾಣ – ಪರಿಣಾಮಗಳ ದೃಷ್ಟಿಯಿಂದ ಅಣುವೆನಿಸಿದರೂ ಇದು, ತನ್ನ ಇತಿ ಮಿತಿಗಳಲ್ಲಿ–ರಾಮಾಯಣದ ಮೇಲೆ ಒಂದು

ವಿಲಕ್ಷಣ 'ಕ್ಷ' ಕಿರಣದ ಕಿರುನೋಟವನ್ನು ಬೀರಲು ಪ್ರಯತ್ನಿಸಿದೆಯೆಂ
ಸಹೃದಯರಿಗೆ ವೇದ್ಯವಾದೀತು.

ಕೃತಿ ಚಿಕ್ಕದಾದರೂ ಆದರಿಸಿ ಮುನ್ನುಡಿಯ ಕಳಶವಿಟ್ಟು ಸಿಂ
ಹಿರಿಮೆ ಹಿರಿಯರದು. ಮುಂಬರುವ ಹರಪನಹಳ್ಳಿಯ ಕನ್ನಡ ಸ
ಸಮ್ಮೇಳನಾಧ್ಯಕ್ಷ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರ
ಅಲ್ಪಾವಧಿಯಲ್ಲಿಯೇ ದೊರೆತುದು ಕೃತಿಯ ಭಾಗ್ಯ.

ಪ್ರಬೋಧ ಪುಸ್ತಕಮಾಲೆ, ಪ್ರಕಟನೆಯ ಹೊಣೆಹೊತ್ತು ನೆರವಿ
ಮತ್ತೊಂದು ವಿಶೇಷ. ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ಎಲ್ಲ
ಗ್ರಂಥಪ್ರಕಾಶನವೂ ಅದರ ಗುರಿಯೆಂಬುದಕ್ಕೆ ಈ ಹೊತ್ತಗೆಯ ಪ್ರ
ಸಾಕ್ಷಿ.

ಗ್ರಂಥಮಾಲೆಯ ಪೋಷಕರಾಗಿ ಧನ ಸಹಾಯಮಾಡಿ ಪ್ರೋತ್ಸಾ
ಶ್ರೀಮಾನ್ ಟಿ. ಬಸವರಾಧ್ಯರ ಔದಾರ್ಯವನ್ನು ನೆನೆಯದೆ ನನ್ನ ಕ
ಮುಗಿಯದು. ಇದಕ್ಕಾಗಿ ಶ್ರೀಯುತರಿಗೆ ಪರಮಾತ್ಮನು ಇತೋಪ್ಯ
ವಾದ ಆಯುರಾರೋಗ್ಯಾದಿ ಸಕಲ ಸಂಪತ್ಸಮೃದ್ಧಿಯನ್ನು ದಯೆ
ಲೆಂದು ಹಾರೈಸುತ್ತೇನೆ.

ಕೃತಿ ಸಂಶೋಧನೆಯಲ್ಲಿ ನೆರವಾದ ಗೆಳೆಯರಿಗೂ, ಅಂದವಾಗಿ ಮ
ಕೊಟ್ಟ ಶ್ರೀ ಶ್ರೀನಿವಾಸ ಪ್ರೆಸ್ಸಿನ ಮಾಲೀಕರಿಗೂ ನಾನು ಋಣಿ.

ಸರ್ವಜಿತ್ ಸ|| ಯುಗಾದಿ
೨೩-೩-೧೯೪೭

**ಮ. ಗಂ. ನಂಜುಂಡಾರಾ**

## ಅಮರನ ಒಸಗೆ

ಎನ್ನ ಕಾವ್ಯೋನ್ಮಾದಕಂತರಾತ್ಮೆಯುಮಾಗಿ
ಭಾವೋನ್ನತಿಯ ಹೃದಯವೀಣೆ ನುಡಿಸಿ ;
ಶೂನ್ಯಕಿದಿರಾಂತೆಸೆವ ಮನ್ಮನೋರಾಗಿಣಿಗೆ
ಭವ್ಯಸುಂದರಿಗಮರ ಕಾವ್ಯದೊಸಗೆ.

# ಪರಿವಿಡಿ

# ಪಕ್ಷಿಲಾಕ್ಷಿ



೧

ಪಾವನಕೆ ಪಾವನೆಯ ಪರಿಪೂತೆ ಜಾನಕಿಯ
ನೊಲವಿನಿಂದೊಡಗೂಡಿ ರಾವಣಾರಿ ;
ಲಂಕಾಧಿಪತ್ಯಮಂ ನುತವಿಭೀಷಣಗಿತ್ತು
ಕನ್ನಡವೀರ ಕವಿಸೇನೆ ವೆರಸು.

೨

ಸುರನಿಕರ ನಲವಿಂದೆ ಪೂಮಳೆಯ ಸುರಿಸುತಿರೆ
ರಾಘವನು ಬಾನ್ದೇರನೇರಿ ಮುದದೆ;
ಮುಗಿಲ ಮಾರ್ಗದೆ ನಿಂದು ಮುನ್ನೀರ ಸುಟ್ಟಿಸುತೆ
ವೈದೇಹಿಗಿಂತೆಂದನೊಲವಿನಿಂದೆ.

**ಕಡಲು**

೩

ಕಿರುತಾರೆ ಮಿನುಗುತಿಹ ತಿಳಿನೀಲಿಯಾಗಸವು
ಬೇರಾದ ತೆರನಂತೆ ಛಾಯೆಪಥದೆ ;
ನೊರೆಯುಂಡೆ ಕಡಲಿಂದು ಸೇತುವಿಂ ಬೇರಾಗಿ
ರಾಜಿಪುದು ಮಲಯಾದ್ರಿವರೆಗೆ, ದೇವಿ !

೪

ರವಿಕಿರಣವಿವಸಿಂದೆ ನೀರಬಸಿರಾಂಪುದಾ
ಮಣಿಗಣದ ಧನಿಕನಿವ ಮರೆವುದೆಂತು ?
ಇವನಲ್ಲಿ ಜನಿಸಿ ಶಶಿ ತಮವಳಿಸಿ ಬೆಳಗುವನು
ಬಡಬಾಗ್ನಿ ಬಸಿರೊಳೇ ಬೇಯುತಿಹುದು.

೫

ಹರನಂತೆ ಬಹುರೂಪದಳೆವುದೀ ನೀರಧಿಯು
ನಾಲ್ದೆಸೆಗೆ ಪರಿವುದನು ಬಣ್ಣಿಸುವರೆ ?
ಲೋಕಗಳ ಸಂಹರಿಸಿ ಹರಿ ತನ್ನೊಳಳವಡಿಸಿ
ಕಲ್ಪಾಂತದೊಳು ಮಲಗಿ ಸುಖಿಸನಿಲ್ಲಿ.

೬

ಸುರಪ ಗರಿ ಕಡಿವಂದು ಗಿರಿನಿಕರ ನೊರೆವೊಗಲು
ಶರಣಿತ್ತ ಮಹಿತನಿವ, ಮಹಿತಚರಿತೆ !
ಪಾತಾಳದಿಂದೆತ್ತಿ ಹರಿವರಿಸಿದಿಳೆವಧುಗೆ
ಈ ನೀರೆ ಮದುವೆಯಾ ಪರದೆಯಾಯ್ತು.

೭

ತೊರೆವೆಣ್ಗಳಲೆ ದುಟಿಯ ನಲವಿಂದೆ ಸವಿಯುತ್ತೆ
ತನ್ನಧರವೀಂಟಿಸುವ ಚದುರನಿವನು ;
ನದಿಮೊಗದ ಜೀವಿಗಳ ಕಬಳಿಸುವ ಭರದೊಳಗೆ
ತಿಮಿ ಶಿರದಿ ಚಿಮ್ಮುವಾ ಧಾರೆ ನೋಡು.

೮

ನಿನ್ನ ತುಟಿಗೆಣೆಯಪ್ಪ ಪವಳದಾ ಕುಡಿಗಳೊಳು
ಶಂಖ ನಸು ನುಸುಳುತಿಹ ಸೊಗಸ ನೋಡು ;
ನೀರ್ಗುಡಿಯೆ ಕೆಳಗಿಳಿದು ಸುಳಿಯೊಳಗೆ ಸುತ್ತುತಿಹ
ಮುಗಿಲು ಜಲಮಥನವನು ನೆನಪಿಸುವುದು.

**ಕಡಲ ದಡ**

೯

ಸಿರಿಹೊಂಗೆ ತಾಳೆಯಾ ತರುರಾಜಿನೀಲಿಯೊಲು
ಮೆರೆಯುತಿಹ ಕಡಲದಡವಂಬುಜಾಕ್ಷಿ;
ಚಕ್ರದಂಚಿಗೆ ಬಿಗಿದ ಕಾರ್ಬೊನ್ನ ಪಟ್ಟಿಯೊಲು
ರಾಜಿಪುದು ಕರ್ಪಿನಿಂದಿಂದುವದನೆ !

೧೦

ನಿನ್ನ ತುಟಿಗಾಶಿಸುತೆ ಸಿಂಗರವು ತಡವೆಂದು
ತವಕಪಡುವೆನ್ನೆದೆಯ ನೋವನರಿದು ;
ಕೇದಗೆಯ ಧೂಲಿಯಿಂದೊಯ್ಯನೈತರುವನಿಲ
ನಿನ್ನ ಮುಖಮುಂಡನವ ಗೈವನೇನೋ !

೧೧

ಫಲಭರದೆ ಬಾಗಿದೀ ಯಡಕೆತೋಟಗಳಿಂದೆ
ಮರಳಿನೊಳು ಕೆದರಿರುವ ಮುತ್ತಿನಿಂದೆ ;
ಮೆರೆಯುತಿಹ ದಡವೆಡೆಗೆ ಬೇಗದಿಂ ಬಾನ್ದೀರ
ನಡರಿ ನಾವೈತರುವ ಬೆಡಗ ನೋಡು.

**ವಿಮಾನಾವತರಣ**

೧೨

ಸುರಸರಣಿಯಿಂದೊರ್ಮೆ ಮುಗಿಲೆಡೆಯೊಳೋರೋರ್ಮೆ
ಖಗಪಥದೊಳೊರ್ಮೆಯಿಾ ಕುಸುಮಯಾನ ;
ನನ್ನ ಮನವೆಂತಂತೆ ನಡೆಯುತಿರೆ ಸುಳಿಗಾಳಿ
ನಿನ್ನ ಮೊಗ ಚೆವರ್ವನಿಯ ಬತ್ತಿಸುವುದು.

೧೩

ಕಿಟಕಿಯೊಳು ನೀಂ ಮುದದೆ ಕೈಚಾಚಿ ಮುಟ್ಟುತಿರೆ
ಮುಂಗೈಗೆ ಮಿಂಚಿನೆಳೆ ಬಳೆಯ ದೊಡಿಸಿ ;
ಕಡುಗೋಪಿ ನೀನೆಂದು ಹೆದರಿ ಯೊಡನೆಯನಿತ್ತು
ಗೌರವಿಸಿ ಕಳುಪುತಿಹ ಮುಗಿಲ ನೋಡು.

೧೪

ಕಡಲಿನಿಂ ಕಾಡುನೆಲವೋಡುವುವೊ ತಾವೆನಲು
ತೋರುತಿವೆ ಹಿಂದಿರುಗಿ ನೋಡಲೆಮಗೆ ;
ವನರಾಜಿ ಸೋಜಿಗವ ತೋರ್ಪುದೆನೆ ದಿವಯಾನ
ಕೆಳಕೆಳಗೆ ಇಳಿಯುತಿಹ ಸೊಬಗ ನೋಡು.

೧೫

ಗಿರಿಶಿಖರದೆಡೆಯಿಂದೆ ತಿರೆಯು ಕೆಳಗಿಳಿವುದೆನೆ
ಬುಡದಿಂದ ಮೇಲೊಗೆವುವೆನೆ ತರುಗಳು ;
ಬತ್ತಿದೊಲು ಕಾಣುವೀ ಹೊಳೆ ವ್ಯಕ್ತವಾಗುತಿದೆ
ಬುವಿಯೆದ್ದು ಪಕ್ಕಕೈತರುವ ತೆರದೆ.

೧೬

ಹಿಮಗಿರಿಯ ಸಾಲಿನಿಂ ಕನ್ಯಾಕುಮಾರಿವರೆ –
ಗೆಸೆಯುವಾ ಮೂದೆಸೆಯ ಕಡಲ ದಡದೆ ;
ಮೂಡ ಪಡು ಶೈಲವನಮಾಲೆಯಿಂ ಭಾರತವು
ಬಿಗಿದ ಬಿಲ್ಲನು ಹೋಲಿ ಬೆಳಗುತಿಹುದು.

ಕಂನಾಡು

೧೭

ಭಾರತದ ಹೃದಯಮೆನೆ ರಾಜಿಪುದು ಸಿರಿಬನವು
ಕನ್ಯಾಕುಮಾರಿಯಿಂ ವಿಂಧ್ಯವರೆಗೆ ;
ಕಣ್ಗೆಡ್ಡವಾಗಿರುವ ಕರುನಾಡ ಸೋಜಿಗವ
ಕಣ್ದಣಿಯೆ ನೋಡಿಂದು, ಕಮಲನಯನೆ !

೧೮

ನಿನ್ನ ನಾನರಸುತಲಿ ಬನಬನದೆ ನೋಡಿದೀ
ಕರ್ನಾಟ ಮಧುರ ವನದೃಶ್ಯಗಳನು ;
ಗುರುತಿಸುತೆ ತೋರುವೆನು ಪರಿಕಿಸೌ ಮನದನ್ನೆ
ಸಗ್ಗಿಗರ ಸದನಮಿದು ಸೊಗದ ಸುಗ್ಗಿ.

೧೯

ಭೂರಮೆಯ ಮುಕುಟಮೆನೆ ರಾಜಿಸುವ ನೀಲಗಿರಿ
ಬನಸಾಲು ಕವಲೊಡೆದು ಬಡಗಣೆಡೆಗೆ ;
ಎಡೆಬಿಡದೆ ನಡೆದಿಹುದು ಭಾರತಿಯು ಧರಿಸಿರುವ
ಪಚ್ಚೆ ಯೇಕಾವಳಿಯ ಮಾಲೆಯಂತೆ.

೨೦

ಮುಗಿಲ ಮುದ್ದಿಪ ಬ್ರಹ್ಮಗಿರಿ ಶಿಖರದಿಂ ಪರಿದು
ಮಹಿಷಮಂಡಲ ಬುವಿಯ ನನೆಸಿ ಮುಂದೆ ;
ಕನ್ನಾಡ ಪೊಲಗಳೊಳು ಚಿನ್ನದಾ ಬೆಳೆ ಬೆಳೆಸಿ
ಕಾವೇರಿ ಕಡಲ ಬಳಿ ಸಾರ್ವಳಲ್ಲಿ.

೨೧

ಮಲೆನಾಡ ಕಾಡೊಳಗೆ ಚಿಗುರಿಡಿದ ಗಿಡಗಳನು
ಕುಸುಮಿಸಿದ ಲತೆಗಳಿವು ತಬ್ಬಿ ಮುದದೆ ;
ಸುಳಿಗಾಳಿಯಿಂದಲುಗಿ ಮುಂಗುಡಿಯ ತುಟಿಯಿಂದೆ
ಮುದ್ದಿಪುದ ನೋಡಿ ಮನವರಳಿತೆನಗೆ.

೨೨

ಮಹಿಷಗಿರಿಶಿರದೊಳಗೆ ಕೊಳದಬಳಿ ನೆಲೆಸಿರುವ
ಚಾಮುಂಡಿಕಾಂಬೆಯಾ ಗುಡಿಯ ನೋಡು ;
ಕವಲೊಡೆದ ಕಾವೇರಿ ತೋಳಿಂದೆ ತಬ್ಬುತಿರೆ
ಮಿರುಗುತಿದೆ ಶ್ರೀರಂಗಪುರವು ಮುದದೆ.

೨೩

ಕಾವೇರಿ ತಂಗಿ ಬಹು ಸುಂದರಿಯು ಕನ್ನಡಿತಿ
ಮನದನ್ನೆ ಕಪಿನಿಯನು ವರಿಸಿಯವಳ ;
ವರಭಕ್ತಿಗೊಲಿದಮರ ಕೈಲಾಸ ಮರೆದೆಸೆವ
ನಂಜುಗೊರಲನ ಸದನ ಮೆರೆವುದಲ್ಲಿ.

೨೪

ನಮಗಂದು ಮಿಾಯೆ ಜಲಮಿಲ್ಲೆಂದು ಸೌಮಿತ್ರಿ
ಧನುಷ್ಕೋಟಿಯಿಂ ದೇವಗಂಗೆ ಬರಿಸಿ
ಚುಂಚಿನಿಂ ಕಟ್ಟೆಯನು ಹಣಿದು ನಿಲಿಸಿದ ನೆಲೆಯು
ಲಕ್ಷ್ಮಣನ ತೀರ್ಥಮಿದೆ ದಿವ್ಯ ಕ್ಷೇತ್ರ.

೨೫

ಕನ್ನಾಡ ಸೊಬಗುಂಡು ಸಂತಸದೆ ಶಿವಶಿರವ
ತೂಗುತಿರೆ ಮುಂಡೆನೀರ್ತುರ್ಳುಕಿ ಬೀಳೆ ;
ಸಿಡಿಲು ಮಿಂಚುಗಳಿಂದೆ ತೊಳಗುತಿಹ ಕಾರ್ಮುಗಿಲ
ಶಿವಸಮುದ್ರವ ನೋಡು ಮೊರೆವುದಲ್ಲಿ.

೨೬

ಬೆಳ್ಗೊಳದ ತೀರದಲಿ ಚಂದ್ರಗಿರಿ ಮುಂಡೆಯಲಿ
ತಲೆಯೆತ್ತಿ ನಿಂತಿರುವ ಕೋಡುಗಲ್ಲು ;
ಸುಖದುಃಖಗಳ ಸಹಿಸಿ ನಿಂದಿರುವ ಶ್ರಮಣನೊಲು
ಮೊಗವೆತ್ತಿ ನೋಡುತಿದೆ, ಕಾತರಾಕ್ಷಿ!

೨೭

ಮೂಡಲಿಂ ಬಸವನೊಲು ಪಡುವಲಿಂ ಪಾವಿನೊಲು
ತೆಂಕಲಿಂ ಬೆನಕನೆನೆ ಬಡಗಲಿಂದೆ ;
ಶಿವಲಿಂಗ ಮೆಂಬಂತೆ ಕಾಣುವೀಕ್ಷೇತ್ರಮಿದು
ಶಿವಗಂಗೆ ಪೆಸರಿಂದೆ ಬೆಳಗುತಿಹುದು.

೨೮

ರಾಮಗಿರಿ ಕೆಲದೊಳಗೆ ಸಿದ್ಧಗಳ ಸದನಮೆನೆ
ಗೌತಮನು ನೆಲೆಸಿರುವ ಸಿದ್ಧಗಂಗೆ ;
ಪನ್ನೆರಡು ಬರಿಸದಾ ಬರದಲ್ಲಿ ಜೀವರಿಗೆ
ಅನ್ನದಾಸೋಹಸುರಧೇನುವಿದುವೆ.

೨೯

ಮಲಗಿರುವ ಬಸವನೊಲು ಗಿರಿಯೊಂದು ದೂರದಲಿ
ಕರ್ಣಾಟಶಿಖರಮೆನೆ ಕಾಣ್ಬುದಲ್ಲಿ ;
ಮೆರೆವಮೃತ ಸರದಿಂದೆ ಬೆಳಗುತಿಹ ನಂದಿಗಿರಿ
ನಂದನೋದ್ಯಾನ ಸಿರಿಸದನದಂತೆ.

೩೦

ವನವಧುವು ಪಿಡಿದಿರುವ, ಪಚ್ಚೆ ಚೌಕಟ್ಟನಿಂ
ಬಿಗಿದೆಸೆವ ಮಣಿಮುಕುರವೆಂಬ ತೆರದೆ ;
ಅಂಚಿನಲಿ ಬಿಂಬಿಸಿರೆ ಪಸುರು ಪೊದೆಗಳ ಸಾಲು
ತಿಳಿನೀರಿನಿಂ ಪೊಳೆವ ಕೊಳವ ನೋಡು.

೩೧

ಅಜಕಮಂಡಲವೆನ್ನ ಶರಹತಿಯ ಬಿರುಸಿಂದೆ
ತುಳುಕಿ ಜಲ ದಿವದಿಂದೆ ನೆಲನ ಸಾರ್ದು ;
ನೂರಾರು ಬಾರು ಕೆಳಗುಕ್ಕಿ ನಾಲ್ಕೆಸಳಾಗಿ
ಶರವತಿಯ ಜಲಪಾತ ವೊರೆವುದಲ್ಲಿ.

೩೨

ಮಲೆನಾಡ ಮಡಲಿನಲಿ ಮಂಜುಳೋದ್ಯಾನದಲಿ
• ಧರ್ಮಸ್ಥಲದೊಡೆಯನೀ ಮಂಜುನಾಥ ;
ಜಗದ ಹೆಗ್ಗಡೆ ದೇವ ನೆಲೆಸಿದೀ ಬುವಿಸಗ್ಗ
ಜನದಳಲಗೊಂಬ ಚಿರಶಾಂತಿದಾತ.

೩೩

ಪಡುಗಡಲ ಸೆರಗಿನಲಿ ಗೋಕರ್ಣ ಪೀಠದಲಿ
ರಾಜಿಸುವ ಮಹಬಲೇಶ್ವರನ ಕ್ಷೇತ್ರ ;
ರಾವಣನ ವರಭಕ್ತಿಗೊಲಿದು ಶಿವ ನೆಲೆಸಿರುವ
ಬುವಿಯ ಕೈಲಾಸಮೆನೆ ತೋರ್ಪುದಿಲ್ಲಿ.

೩೪

ಮುಂದೆ ಕಾಂಬುದು ನೋಡು ಮಾಲ್ಯವಂತದ ಶಿಖರ
ಬಾನ್ದೆರೆಯ ಕೆರೆಯುತ್ತೆ ನೀರ ಸುರಿಸಿ ;
ನಿನ್ನಗಲಿನಿಂದಾನು ಕಂಬನಿಯ ಸುರಿಸುತಿರೆ
ಸಹಕರಿಸಿ ದುಗುಡಕರೆಭಾಗಿಯಾಯ್ತು.

೩೫

ಸುರಹೊನ್ನೆ ತರುಗಳಿಂ ಸೌರಭವನಾಂತೆಸೆವ
ಮಾಲ್ಯವಂತದ ಶಿಖರದೆಡೆಯ ಸಾರ್ದು ;
ಪೊಸ ಮುಗಿಲ ನೀಲಿಮೆಯು ಕಣ್ಗೆಡ್ಡವಾಗಿಹುದು
ಸಾಕಿದನು ಬಣ್ಣಿಪೊಡೆ ದುಗುಡವಲ್ತೆ !

೩೬

ಗಂಗೆಯನು ಕಡೆಗೆಯ್ವ ತುಂಗೆಯಾ ದಡದಲ್ಲಿ
ಪಂಪೆಯರಸನ ನೋಟ ಹೇಮಕೂಟ ;
ಮಾತಂಗ ಗಿರಿತಡಿಯು ತಿರುಗಣೆಯ ಜಲದಲ್ಲಿ
ಸಾರಸಂಗಳ ಮಧುರ ಸರಸದಾಟ.

೩೭

ಸುರಪುರವನಣಕಿಸುವ ಸಿರಿಸದನದಂತೆಸೆವ
ಕಿಷ್ಕಿಂಧೆ ಕರ್ಣಾಟರಾಜಧಾನಿ ;
ಸ್ಫಟಿಕ ಶಿಲೆ ಸೌಧಗಳು ರವಿ ಶಶಿಯ ಶಾಲೆಗಳು
ಮಣಿಮುಕುರ ಮಿಸುನಿಯಿಂ ಮಿರುಗುತಿಹವು.

೩೮

ಚೆಂದುಟಿಯ ಚನ್ನೆಯರು ಕನ್ನಡದ ರನ್ನೆಯರು
ಮೊಗವೆತ್ತಿ ನೋಡುವರು ಮುಗುದೆ ನಿನ್ನ;
ಮುತ್ತೈದೆಯರು ಮುದದೆ ಮುತ್ತಿನಾರತಿ ಪಿಡಿದು
ಶೋಭಾನ ಪಾಡುತಲಿ ನಲಿವರಿಲ್ಲಿ.

೩೯

ಮನದನ್ನೆ ಮುನ್ನೋಡು ಶಶಿಮಣಿಯ ಸೌಧದಲಿ
ಕನ್ನಾಡ ಸಮ್ರಾಜ್ಞಿ ದೇವಿ ತಾರೆ,
ಅರಿಸಿನಾ ಕುಂಕುಮವ ಫಲಪುಷ್ಪದುಡುಗೊರೆಯ
ಕರಪಿಡಿದು ರುಮೆಯೊಡನೆ ಕಾಯ್ವಳಲ್ಲಿ.

೪೦

ಆರ್ಧ ಭಾರತಬುವಿಯ ಸವಾ್ರಟ ಸುಗ್ರೀವ
ಏಕಾಂಗವೀರ ಪಟುಭಟರಿಗೊಡೆಯು ;
‘ ಸುಗ್ರೀವನಾಜ್ಞೆ ’ಯೆನೆ ದಂಡಧರನಾಜ್ಞೆಗಿಂ
ಮಿಗಿಲೆನಲು ದರ್ಪದಿಂದಾಳ್ವನಿಲ್ಲಿ.

೪೧

ಹೊಲಗಳೊಳು ಕಳೆಕೀಳ್ವ ಹಳ್ಳಿಯಾ ಲಲನೆಯರು
ರಾಘವನ ದಿಗ್ವಿಜಯ ಗೀತೆಗಳನು ;
ಒಕ್ಕೊರಲ ಸುಣ್ದನಿಯ ರಾಗದಲಿ ಹಾಡುವುದ
ಲಾಲಿಸೌ ಮನಸಾರೆ, ಮಾನಶೀಲೆ !

೪೨

ಹೊಲದ ದಿಬ್ಬಗಳಲ್ಲಿ ಹುಲ್ಲುಗಾವಲಿನಲ್ಲಿ
ದನಕಾಯ್ವ ಹಸುಳೆಯರು ಹರ್ಷದಿಂದೆ,
ರಾಮು - ರಾವಣರಂತೆ ವೇಷಗಳ ಧರಿಸುತಲಿ
ಕದನದಲಿ ತೊಡಗಿರುವ ಬೆಡಗ ನೋಡು.

೪೩

ಪರಸತಿಯ ಕಾಮಿಸಿದ ಪಾಪಿಯನು ತುಂಡರಿಸೆ
ಕನ್ನಾಡ ಪಶುಪಕ್ಷಿ ಮೃಗಗಳೆಲ್ಲ,
ಒಕ್ಕೂಟದಿಂ ನಡೆವ ಒಕ್ಕೊರಲ ಜಯಘೋಷ
ವಭಿನಯಿಪ ಗೋಪಾಲ ಲೀಲೆ ನೋಡು.

೪೪

ಕೊನೆಯುಗುರು ಸೋಂಕಿದೊಡೆ ರಸವೊಸರಿ ಪರಿಯುತಿಹ
ರಸದಾಳೆ ಕಬ್ಬಿನಾ ಬೆಳೆಯು ನೋಡು ;
ತೆಳುಸಿಪ್ಪೆ ಹೊದಿಕೆಯೊಳು ಪೊಳೆವಮೃತ ಗಟ್ಟಿಯೆನೆ
ರಸಬಾಳೆಗೊನೆ ಸಾಲು ಕಾಣ್ಬುದಲ್ಲಿ

೪೫

ಮನುಜತೆಯ ತೊಡೆದಮರಪದವೀಯೆ ತಲೆಯೊಳಗೆ
ನೆಲಸೋಂಕಿಸದೆ 'ಗಂಗೆಪಾಣಿ' ಪೊತ್ತು ;
ಪಗಲಿರುಳು ಕಾದಿರುವ ಪುಣ್ಯಪುರುಷರ ತೆರದೆ
ಮೆರೆಯುತಿಹ ಚೆಂದೆಂಗು ಸಿರಿಯ ನೋಡು.

೪೬

ಸಜ್ಜನರ ನುಡಿಯಂತೆ ಹೆಜ್ಜೇನ ಸವಿಯಂತೆ
ಒಳಹೊರಗೆ ಸ್ಫುರಿಸುವಾ ರಸದೊರೆಯನೆ ;
ಬಾಯ್ನೀರನೊಸರಿಸುವ ತನಿದ್ರಾಕ್ಷೆ ಗೊಂಚಲಿಂ
ಬೆಳಗುತಿಹ ನಾಡಿದುವೆ ಸೊಗದ ಬೀಡು.

೪೭

ಕಾಲಿಂದ ತಲೆತನಕ ಕಿವಿ ಕೈಗಳಲಿ ತೊನೆವ
ಸಿಂಗರದ ಲಂಬಾಣಿ ಲಲನೆಯಂತೆ ;
ಬುಡದಿಂದ ತುದಿವರೆಗೆ ನೂರಾರು ಕೊಂಬೆಯಲಿ
ಫಲಭರದೆ ತೂಗುತಿಹ ಹಲಸ ನೋಡು.

೪೮

ಸುಳಿಗಾಳಿಗಲುಗುತಿಹ ಬಿಳಿ ವೀಳ್ಯದೆಲೆ ನೋಟ
ಮುಗಿಲ ಕೆಣಕುವ ತುದಿಯ ಅಡಕೆ ತೋಟ ;
ಏಲಕ್ಕಿ ಮೆಣಸುಗಳು ಫಲಿಸುತಿಹ ತಾಣಕಿದೊ
ಫಲತರುಗಳಾದರದೆ ಕರೆಯುತಿಹವು.

೪೯

ಮುತ್ತುಗಳ ಗೊಂಚಲೆನೆ ತಲೆಯೆತ್ತಿ ನಿಂತಿರುವ
ತೆನೆ ಬಿಟ್ಟ ಬಿಳಿ ಜೋಳ ಪೊಲಗಳಲ್ಲಿ ;
ಗಿಳಿ ನವಿಲು ಗೊರವಂಕ ಕಾಜಾಣ ಕೋಗಿಲೆಯ
ನಲ್ವಕ್ಕಿ ಕಲರವವು ಕರೆವುದಿಲ್ಲಿ.

೫೦

ಧರ್ಮಾರ್ಥ ಕಾಮು ವರಮೋಕ್ಷಗಳ ತೆರನಂತೆ
ನಾಲ್ಕೆಸಳ ರಾಗಿತೆನೆ ಬೆಳೆವ ನಾಡು ;
ನರೆದಲೆಗ ನೆಲ್ಲುಗಳ ಜಗಳದೊಳಗೆನ್ನಿಂದೆ
ಬಹುಮತಿಯು ಬಿರುದಾಂತ ಬೆಳೆಯ ಬೀಡು.

೫೧

ಮುಗುದೆಯೊಲು ತಲೆವಾಗಿ ತೂಗುತಿಹ ತೆನೆಗಳಿಂ
ಬೆಳಗುತಿಹ ಗದ್ದೆಗಳ ಸೊಗಸ ನೋಡು ;
ಕೆರೆಕುಂಟೆ ಕಪಿಲೆಗಳ ಆಸರೆಯ ಪೊಲಗಳಲಿ
ಪಸುರುಡೆಯು ಕನ್ನಡಿತಿ ನಲಿವ ನಾಡು.

೫೨

ಸ್ವಾರ್ಥಮಂ ಸಾಧಿಸಲು ತಲೆವಾಗಿ ತರುವಾಯ
ತಲೆಯೆತ್ತಿ ಪ್ರತಿಭಟಿಪ ಶಠನ ತೆರದೆ ;
ಜಲವೊಗೆಯೆ ತಲೆವಾಗಿ ನೀರೆಳೆದು ಮೇಲೆದ್ದು
ನಿಲ್ಲುತಿಹ ಯಾತಗಳ ಬೆಡಗ ನೋಡು.

೫೩

ಪುರುಷಾರ್ಥಸಾಧಕರು ನೇಗಿಲಿನ ಯೋಗಿಗಳು
ನೆಲೆಸಿರುವ ಗುಡಿಸಿಲಿನ ತೆರನ ನೋಡು ;
ಮನೆಗೆಲಸ ನಿಪುಣೆಯರು ಕನ್ನಡದ ಚನ್ನೆಯರು
ಚೆಲುವು ತಾ ಸುಳಿವುದೆನೆ ನಲಿವರಿಲ್ಲಿ.

೫೪

ನಿನ್ನಗಲಿಕೆಯ ದುಗುಡ ಕಡಲೊಳಗೆ ಮುಳುಗಿರಲು
ದಡಕೆತ್ತಿ ನೆರವಿತ್ತ ಕೆಳೆಯರಿವರು ;
ಕನ್ನಡವ ನುಡಿಯುವೀ ಚಿನ್ನದಾ ನಾಡವರು
ಕರುಣಾಂತರಂಗದಾ ಕಲಿಗಳಿವರು.

೫೫

ಪರೋಪಕಾರವೇ ಪರಮಭಾಗ್ಯವಿದೆಂದು
ಪಗಲಿರುಳು ಪರಿಸುತಿಹ ಜನರ ನಾಡು ;
ಪರಹಿಂಸೆಗೆರಗದಾ ಪರನಾರಿ ಸೋದರರ
ನೆರವಿಯಿಂ ಮೆರೆಯುವಾ ಚೆಲುವ ಬೀಡು.

೫೬

ವಿದ್ಯೆಯಲಿ ಕಲೆಯಲ್ಲಿ ಕಲಿತನದೆ ಕಾಂತಿಯಲಿ
ಚಾಗಭೋಗಗಳಲ್ಲಿ ಯೋಗದಲ್ಲಿ ;
ಕನ್ನಡರಿಗೆಣೆಯಾರು ಮೂಲೋಕದೊಳಗಿನ್ನು
ಕನ್ನಾಡೆ ಬುವಿ ಕಾಮಧೇನುವಲ್ತೆ !

೫೭

ಈ ನಾಡ ಸೋಜಿಗದ ಸೌಂದರ್ಯ ದೃಶ್ಯಗಳ
ಕನ್ನಡಿಗರೆದೆಯೊಲವ ನೆನೆಯೆ ಮನದಿ ;
ಕನ್ನಾಡೆ ಸಾಕೆಮಗೆ ಸಾಕೇತವೇಕಿನ್ನು ?
ಬೇಕಿಲ್ಲ ಸಗ್ಗಸುಖಮೆನಿಪುದಿಲ್ಲಿ.

೫೮

ದಡದ ವಂಜುಲಪೊದೆಯ ಹೊದಿಕೆಯಿಂ ನಸುದೋರ್ಪ
ಚಪಲ ಸಾರಸರಾಜಿ ಸೊಬಗುವೆತ್ತ ;
ಪಂಪಾ ಸುಸಲಿಲವನು ದೂರದಿಂ ಕುಡಿವಂತೆ
ದೃಷ್ಟಿಯಿದು ಕಷ್ಟದಿಂ ಪರಿವುದೀಗ.

೫೯

ಮೊಲೆಗೊಂಚಲಿಂದೆಸೆದು ಬಾಗಿದೀಯಸುಗೆ ಲತೆ
ಕೊಳದಡದಿ ತೂಗುತಿರೆ ಮರುಳನಂತೆ ;
ಬಿಗಿಯಪ್ಪಿ ಗೋಳಿಡುತೆ ಕಂಬನಿಯ ಹೊಳೆ ಹರಿಯೆ
ತಡೆದನಾ ಸೌಮಿತ್ರಿ, ದುಃಖದಾತ್ರಿ !

೬೦

ಆಗಲದೀ ಕೋಕೆಗಳ ಜೊತೆಗಳಿವು ನೈದಿಲೆಯ
ಕೇಸರವನೊಂದಕೊಂದೀಯುತಿಲ್ಲಿ;
ನಲ್ಮೆಮಿಗೆ ನಲಿಯುತಿರೆ ಬಾಯ್ನೀರನೊಸರಿಸುತೆ
ನೋಡಿದೆನು ಪಲಕಾಲ, **ಪಕ್ಷ್ಮಲಾಕ್ಷಿ!**

೬೧

ಎದೆಯೊಲವ ತೆಗೆದೀವ ತೆರನಂತೆ ಯಲಚಿಪಣ್
ರುಚಿನೋಡಿ ತಿನಲಿತ್ತು ತಣಿಸಿದೆಮ್ಮ;
ವರಭಕ್ತೆ ಕನ್ನಡಿತಿ ಶಬರಿಯಿಾ ಮರದಡಿಯ
ಗುಡಿಸಿಲಿನ ಬಳಿ ನಿಂತು ನಮಿಸುತಿಹಳು.

೬೨

ದುಃಖಸೇತುವಿದೆನಲು ಮುನ್ನೋಡು ಮನದನ್ನೆ
ನಿನ್ನರಸಿ ತಿರುಗಿದಾ ನೆಲೆಗಳಲ್ಲಿ;
ಕಿರುತೆರೆಯ ಸಾಲಿನೊಳು ಕವಿ ಕವಿದು ಬರುತಿರುವ
ಕನಿಕರದ ಕರುಳಿನುರಿದೃಶ್ಯಗಳನು.

೬೩

ನಿನ್ನನಾಂ ಪುಡುಕುತಿರೆ ಜಾರಿಯುಡಿದಾವರೆಯಿ–
ನಗಲಿಕೆಯ ದುಗುಡಮೆನೆ ಮೌನವಾಗಿ;
ಬಿಳ್ದುರುಳಿ ನೆಲದೊಳಗೆ ಪೊಳೆವ ಕಾಲ್ಕಡಗವನು
ಕಂಡ ನೆಲೆಯಿದು ನೋಡು, ಕಮಲನಯನೆ!

೬೪

ರಾವಣನು ಕೊಂಡೊಯ್ದ ಹಾದಿಯನು ಭಯಶೀಲೆ
ಕೃಪೆಯಿಂದೆ ಲತೆಗಳಿವು ಸನ್ನೆಗೈದು;
ಉಸಿರಲನುವಿಲ್ಲದೆಯೆ ಚಿಗುರ ಕೈಬೆರಳಿಂದೆ
ಬಾಗಿ ತೋರಿದುವಿಲ್ಲಿ, ಭವ್ಯಶೀಲೆ!

೬೫

ಎಳೆಗರಿಕೆ ಮೇವುದನು ತೊರೆದ ಪೆಣ್ ಚಿಗರಿಗಳು
ಬಿಚ್ಚೈವೆಯ ಕಂಗಳಂ ತೆಂಕಣೆಡೆಗೆ;
ತಿರುಪಿ ತೋರ್ದವು ನಿನ್ನ ಕೊಂಡೊಯ್ದ ಹಾದಿಯನು
ವಿಪಿನದೊಳಗಲೆವ ನಿನ್ನಿನಿಯಗಿಲ್ಲಿ.

೬೬

ಮಳೆಹನಿಯ ಬಿರುಸಿಂದೆ ಕದಡಿದಾ ಕೆರೆಗಂಪು
ನಸುಬಿರಿದ ನೀಪಸುಮದೆಲರಿನಿಂಪು ;
ಇಂಚರದ ನವಿಲುಗಳ ನರ್ತನವ ನೋಡಿ ಮನ
ಮರುಳಾದುದೆನಗಂದು, ಪದ್ಮಗಂಧಿ !

೬೭

ನೀನಂದು ನಡುನಡುಗಿ ಬಿಗಿಯಪ್ಪುತಿರ್ದುದಂ
ನೆನೆ ನೆನೆದು ಕಷ್ಟದಿಂ ಗವಿಯ ಕೆಲದಿ ;
ಮೊಳಗುತಿಹ ಗುಡುಗುಗಳ ದನಿಗೇಳಿ ಮಳೆದಿನವ
ಕಳೆದೆನೆಲೆ ಭಯಲೋಲೆ, ಭವ್ಯಶೀಲೆ !

೬೮

ಮಳೆಗರೆಯೆ ನಾಂದಿಳೆಯ ಬಾಷ್ಪದಿಂದರಳಿದೀ
ನೆಲಸಂಪಿಗೆಯ ಕುಸುಮ ನಿಕರವೆನ್ನ ;
ಮದುವೆಯೊಳು ಹೋಮದಿಂ ಕೆಂಪಡರಿ ರಂಜಿಸಿದ
ನಿನ್ನ ಕಂಗಳ ಹೋಲಿ ಪೀಡಿಸಿದುವು.

೬೯

ರಾವಣನಿಗಿದಿರಾಂತು ಪರಸತಿಯ ಕಾಪಿಡಲು
ತನುತೆತ್ತ ವೀರ ಜಟಾಯುಗಿಲ್ಲಿ ;
ಪಿತನಿಗೆಂತಂತು ಪರಲೋಕ ಕ್ರಿಯೆ ಸಲಿಸಿದೀ
ನೆಲೆಯಿದನು ವಂದಿಸೌ, ಸುಂದರಾಂಗಿ !

ಪಂಚವಟಿ

೭೦

ಪುಷ್ಪಕದಿ ಜೋಲ್ದೆಸೆವ ಪೊಂಗೆಜ್ಜೆ ದನಿಗೇಳಿ
ಗೋದಾವರೀ ಕೆಲದ ಸಾರಸಾಳಿ;
ಬಾಂದಳಕೆ ನೆಗೆಯುತಿಹುವಿದಿರೇಳ್ವುವೆನೆ ಮುದದಿ
ಮನಸಾರೆ ಪರಿಕಿಸೌ, ಮಾನಶೀಲೆ !

೭೧

ತನುಗಾತ್ರಿ ನೀನಂದು ನೀರೆರೆದು ಬೆಳೆಸಿರ್ದ
ಎಳೆಮಾವ ಸೊಸಿಗಳೊಳು ತಿರುಗುತಿರುವ ;
ಚಿಗರಿಗಳು ಮೊಗವೆತ್ತಿ ನೋಡುವೀ ಪಂಚವಟಿ
ಪಲದಿನಕೆ ಕಂಡುದೆನಗಿಂದುವದನೆ !

೭೨

ಬೇಂಟೆಯಿಂ ಹಿಂದಿರುಗಿ ಗೋದಾವರೀ ತೆರೆಯ
ಗಾಳಿಯಿಂ ದಣಿವಳಿಯೆ ಗುಪಿತವಾಗ ;
ವಂಜುಳದ ಪೊದೆಗಳೊಳು ನಿನ್ನಂಕದೊಳು ಮಲಗಿ
ಸುಖಿಸಿದುದ ನೆನೆವೆನೌ, ನೀಲವೇಣಿ !

೭೩

ಮುದುರಿ ನುಲಿದಿರುಹಿರುವ ತಾವರೆಯ ದಂಟಿನೊಲು
ಹಾದಿನಡೆದಲಸಿದೆನ್ನಂಗಗಳನು ;
ಒತ್ತುತಲಿ ಮಿದುವಾಗಿ ನನ್ನೆದೆಯ ಮೇಲ್ಮಲಗಿ
ನಿದ್ರಿಸಿದ ನೆಲೆಯಿದನು ಮರೆವೆಯೆಂತು ?

೭೪

ಜಾನಕಿಯೆ, ನೀಂ ಮಿಂದ ಪುಣ್ಯತೀರ್ಥದಿನೆಸೆವ
ಭಾವುಕರ ಭಾಗ್ಯಮೆನೆ ಕಂಗೊಳಿಸುವ ;
ತಂಗೊಳದ ತೀರದಲಿ ನಿಬಿಡತರುರಾಜಿಯಲಿ
ವಿರಹಿ ಸೆರೆಮನೆಯೆನಿಪ ರಾಮಗಿರಿಯು.

೭೫

ಪ್ರಸ್ರವಣಗಿರಿಯಲ್ಲಿ ಸೌಮಿತ್ರಿ ಸೇವೆಯನು
ತಿಳಿನೀರ ತಂಬೆಲರ ಗೋದೆಯೆನ್ನು ;
ಹೊಳೆದಡದ ಪೊದೆಗಳೊಳು ಪಗಲಿರುಳ ಮರೆದೆಮ್ಮ
ಕೇಳಿಗಳ ಸವಿಗನಸ ನೆನೆವೆಯೇನು ?

೭೬

ಕದಪುಗಳ ಮೇಳೈಸಿ ಮೆಲುನುಡಿಯೊಳೇನೇನೊ
ಹರಟುತಲಿ ಬಿಗಿಯಪ್ಪಿ ಮಲಗಿದೆಮಗೆ ;
ತಿಳಿಯದೆಯೆ ಕಳೆದಿತ್ತು ರಾತ್ರಿಯದು ಮನದನ್ನೆ
ನೆನೆಯಲೆಮಗದೆ ಸೊಗವ ನೀವುದಿಂದು.

೭೭

ಕನಕಮೃಗರೂಪದಿಂದೆಮ್ಮನುರೆ ವಂಚಿಸಿದ
ಮಾರೀಚ ಮಡಿದುದೀ ನೆಲೆಯೊಳಂದು ;
ಕವಡುನುಡಿಗಂಜೆ ನೀಂ ಕಡುತಪಸಿ ಮೈದುನನು
ಬೆಸನದಿಂದಗಲಿದೆಡೆ ಮುಗುದೆ, ನೋಡು.

೭೮

ಪೊನ್ನಜಿಂಕೆಯ ನೆವದೊಳೆಸಗಿದಸುರರ ಕೃತಿಯ
ನೆನೆಯೆ ಮರುಕೊಳಿಸುವುದು ದುಗುಡವೆರಸಿ ;
ಕಲ್ಮರಗೆ ಸಿಡಿಲೆದೆಯು ಬಿರಿಯುತಿರೆ ಬನದೊಳಗೆ
ಅಳಲಿದೆನು ಸೀತೆ! ನಾ ನಿನ್ನನಗಲಿ.

೭೯

ಹರಿದ ಮುತ್ತಿನ ಸರದ ಮಣಿಗಳೊಲು ಕಂಬನಿಯು
ಎಡೆಬಿಡದೆ ಸುರಿದವನಿ ನೆನೆಯುತಿರಲು ;
ಅದಿರುತಿರೆ ತುಟಿ ಮೂಗು ದನಿಗದ್ಗತೆಯನಾಂತು
ಹೃದಯದುದ್ವೇಗವುಕ್ಕೇರಿತಿಲ್ಲಿ.

೮೦

ಪ್ರಿಯಜನದ ವಿರಹದಿಂ ಜನಿಸಿದಾ ದುಗುಡದುರಿ
ಪ್ರತಿಭಟಿಪ ಬಯಕೆಯಿಂ ಸಹನೆಯಾಂತು ;
ಹೃದಯ ಮರ್ಮದ ವ್ರಣವ ನೋಯಿಪುದು ಹದಮಿೀರಿ
ಮನದೊಳಗೆ ನೆನೆವಂದು ಮುಂದಯಾನೆ.

೮೧

ಬಾಡಿದೀ ಜೀವನದ ಕುಸುಮಗಳನರಳಿಸುವ
ಬಳಲಿದಿಂದ್ರಿಯ ಚಯಕೆ ಜೀವವೀವ ;
ಕಿವಿಗಮೃತಮಯವಾಗಿ ಮನಕೆ ರಸದೊರೆಯೆನಿಪ
ನಿನ್ನ ಮಿದುನುಡಿಗಳನು ನೆನೆದೆನಿಲ್ಲಿ.

೮೨

ಮೈಗಾವಲಿಂಗೆಂದು ಹಿಂದುಳಿದ ಮೈದುನನ
ಮನಮುರಿದು ನನ್ನೆಡೆಗೆ ಕಳುಪೆ, ನೀನು ;
ಕಡುಪಾಪಿ ರಾವಣನು ಕಪಟಮುನಿವೇಷದಿಂ
ಕದ್ದೊಯ್ದುದೀ ವಿಧಿವಿಲಾಸ ಭೂಮಿ.

೮೩

ಎಳೆಮಾವು ತಳದಲ್ಲಿ ತಿಳಿಗೊಳನ ತೀರದಲಿ
ಸುಖಶಯನಕನುವಾಗಿ ಪರ್ಣಶಾಲೆ ;
ರಚಿಸಿ ಯೆದೆಯೊಲವಿಂದೆ ಕಣ್ಣರೆಪ್ಪೆಯ ಹೋಲಿ
ಲಕ್ಷ್ಮಣನು ಪೋಷಿಸಿದ ಪುಣ್ಯಭೂಮಿ.

೮೪

ಹದಮಾಗಿ ಮಾಗಿರ್ದ ಮಾಂಗಾಯಿಗಾಶಿಸುತೆ
ಕೊಸರಾಡಿ ಹೆಗಲೇರಿ ಕೇಳುವಂದು ;
ನಡುನಡುಗಿ ಕಾತರಿಸೆ ಬರಸೆಳೆದು ಬಿಗಿಯಪ್ಪಿ
ಸುರಸುಖಕೆ ನೆರವಿತ್ತ ಸಿರಿ ತರುವಿದು.

೮೫

ತಂಗೊಳದ ತೀರದಲಿ ಪೂಬಿಡಿಸುತಿರೆ ನಿನ್ನ
ಕೈಬಳೆಯ ಮೆಲ್ಲುಲಿಯ ಕೇಳಿ, ಮುಗುದೆ !
ಪೆಣ್ದುಂಬಿ ದನಿಯೆಂದು ಬಂದೆರಗೆ ಬಂಡುಣಿಯು
ಕೈಕೊಡವುತೋಡಿ ನೀಂ ಬಂದುದಿಲ್ಲಿ.

೮೬

ಮುನಿವಧುಗಳೊಲವಿಂದೆ ನೀರ್ತುಂಬೆ ಮುಳುಗಿಸಿದ
ಗಡಿಗೆಗಳ ‘ ಗುಡುಗುಡು ’ವ ದನಿಯಗೇಳ್ದು ;
ಮಳೆಮುಗಿಲ ಗುಡುಗೆಂದು ನರ್ತಿಸುವ ನವಿಲುಗಳ
ಸಂತಸದ ಸೋಜಿಗವ ತೋರ್ದುದಿಲ್ಲಿ.

**ಜನಸ್ಥಾನ**

೮೭

ಗಿರಿನದಿಯ ದಡದಲ್ಲಿ ಅತಿಥಿಸತ್ಕಾರವನೆ
ಮಿಗಿಲೆಂದು ಭಾವಿಸುತೆ ಅಶನವೀವ ;
ಗೃಹಧರ್ಮ ಸಾಧಕರು ತವಸಿಗಳು ನೆಲೆಸಿರುವ
ಮರಗಿಡಗಳೆಡೆಯಿದುವೆ ಸೊಗದ ಬೀಡು.

೮೮

ಎಡರಳಿದುದೆಂದೆಲೆಯ ಹಳೆ ಮನೆಯ ಸರಿಪಡಿಸಿ
ಪಲಕಾಲದಿಂ ತೊರೆದ ನೆಲೆಯ ಸೇರಿ ;
ತೊಗಟೆಗಳನುಡೆಮಾಡಿ ಸೊಗದಿಂದೆ ತವಸಿಗಳು
ನೆಲೆಸಿರುವ ಜನದಾಣದೆಡೆಯ ನೋಡು.

೮೯

ಮಡಿಯಿಂದ ಬಿಸಿಲಿನೊಳು ಹರಡಿರುವ ಕಾಳುಗಳ
ಆಶ್ರಮದ ಹರಿಣಗಳು ಮೇಯೆ ಬರಲು ;
ಮುನಿಪತ್ನಿ ಕೋಪದಿಂ ಹೊಡೆಯಲೆತ್ತಿದ ಕೋಲ
ಮೂಸುತಿರೆ ಮುನಿಗಳುರೆ ನಗುತಲಿಹರು.

೯೦

ಯಜ್ಞವೇದಿಕೆ ಕೆಲದಿ ಎಳೆಗರಿಕೆ ಮೆಲುತಿರುವ
ಪೊಸದಾಗಿ ಬೆಸಲಾದ ಚಿಗರಿಯಿಗ;
ಮುನಿಕುವರರೀಯುತಿಹ ಕಾಳುಗಳ ಕಬಳಿಸುತೆ
ಕುಣಿವ ಮರಿಯನು ನೋಡಿ ನಲಿಯುತಿಹುದು.

೯೧

ಆಶ್ರಮದ ಹೊಲಬಿನೊಳು ಇರುವೆಗೂಡಿನ ಸುತ್ತು
ಮುನಿಸುತರು ಸುರಿದಿರುವ ಅಕ್ಕಿನುಚ್ಚು;
ಸೊನ್ನೆಯೊಲು ಬಿಟ್ಟಿರುವ ರಂಗೋಲಿಸಾಲಿನೊಲು
ಎಲೆವನೆಯ ಕೆಲದೊಳಗೆ ಮನಕೆ ಮೆಚ್ಚು.

೯೨

ಹೋಮಕುಂಡದ ಸುತ್ತು ಸಾರಿಸಿದ ನೆಲದಲ್ಲಿ
ನಲವಿಂದೆ ರಂಗವಲಿ ಬಿಡುತಲಿರುವ;
ಮುನಿವಧುಗಳೊಲವಿಂದೆ ನುಣ್ದನಿಯ ಕೊರಲಿಂದೆ
ಹಾಡುವುದ ಕಿವಿಗೊಟ್ಟು ಕೇಳು, ದೇವಿ!

೯೩

ಗುರುಪೇಳ್ವ ಪಳೆವಾತ ಪಡಿನುಡಿದು ಪಠಿಸುತಿಹ
ನುಡಿಗೇಳಿ ಮುನಿಸುತರನಣಕಿಪಂತೆ
ಅಧ್ಯಯನ ಮಾಡುತಲಿ ನುಡಿಗುಡುವ ಗಿಳಿವಿಂಡು
ಬನ ಪುರೋಹಿತರಂತೆ ಬೆಳಗುತಿಹವು.

೯೪

ಆಜ್ಯದಿಂದನುದಿನವು ತಣಿದ ಹೋಮಾಗ್ನಿಯಿದು
ತನುವೆರಸು ತವಸಿಗಳ ಸಗ್ಗಕೊಯ್ಯೆ;
ಸುಕೃತದಿಂ ಸೋಪಾನ ಪಙ್ಕ್ತಿಯನು ರಚಿಸಿದೊಲು
ನೆಲ–ಮುಗಿಲ ಬಿಗಿದಿರುವ ಪೊಗೆಯ ನೋಡು.

೯೫

ಭೂದೇವಿ ಪೊದೆದಿರುವ ರನ್ನಗಂಬಳಿಯಂತೆ
ಪೂಬಿಟ್ಟ ಪಸುರುಪೊದೆ, ಬನವನಪ್ಪಿ ;
ತಾರೆಗಳ ಸಿಂಗರಿಸಿದಾಗಸವು ಕಾದಲೆಯ
ಕಾಮಿಸುವ ತೆರನಂತೆ ಕಾಂಬುದಿಲ್ಲಿ.

೯೬

ಮುನಿಸುತರು ಮಡಿತೊಳೆದು ಒಣಗಿಸಲು ಬಿಸಿಲಿನಲಿ
ನಾರುಡೆಯು ಹರಡಿರುವ ಬನತರುಗಳು ;
ಮಡಿಯುಟ್ಟು ಮೇಲ್ಮೊಗದೆ ನಿಂದು ತಪವೆಸಗುತಿಹ
ತಪಸಿಗಳನನುಕರಿಸಿ ಮೆರೆವುವಿಲ್ಲಿ.

೯೭

ಕೇಸರವು ಮೊಳೆಯದೀ ಸಿಂಹಶಿಶುಗಳವೆರಸು
ಚಿಗರಿಮರಿ ಕೆಳೆ ಬಳೆಸಿ ತಾಯನುಳಿದು ;
ಪಾಲ್ಸುರಿವ ಕೆಚ್ಚಲನು ನಲವಿಂದ ಕುಡಿಯುತಿರೆ
ಪೆಣ್ಸಿಂಗ ಕಣ್ಮುಚ್ಚಿ ತೊನೆವುದಿಲ್ಲಿ.

೯೮

ಆಶ್ರಮದ ಹೊಲಬಿನೊಳು ತಡವರಿಸಿ ಎಡವುತಿಹ
ಮುದಿ ಕುರುಡತವಸಿ ಕೈಗೋಲ ಪಿಡಿದು ;
ಹಾದಿ ತೋರುವನಂತೆ ಪರಿಚಯದ ಕಪಿಯೊಂದು
ಮುನ್ನಡೆವ ಸಿರಿ ನೋಡು, ಕುಂದರದನೆ !

೯೯

ಉರಿ ಬಿಸಿಲಿಗಳುಕಿದೀ ಪಾವು ಭಯವಿಲ್ಲದೆಯೆ
ನವಿಲಗರಿ ಪೊದೆಪುಗುವ ಸೋಜಿಗವನು ;
ಪುಟ್ಟು ವೈರವ ತೊರೆದು ನಟ್ಟ ಕೆಳೆ ಕಳೆಗೊಂಡು
ಮೃಗಪಕ್ಷಿ ಸಂಕುಲವು ನಲಿವುದಿಲ್ಲಿ.

೧೦೦

ತಪಸಿನಲಿ ಮುದಿಯಾಗಿ ಬೆಳಗುವೀ ತವಸಿಗಳು
ಬೊಮ್ಮತೇಜದಿ ಜಗಕೆ ಪೂಜ್ಯರಾಗಿ ;
ಕಂದಫಲ ಮೂಲಗಳ ಭುಂಜಿಸುತೆ ಪಗಲಿರಳು
ಪರಮನೊಳು ಮನವಿರಿಸಿ ಸುಖಿಪರಿಲ್ಲಿ.

**ಅಗಸ್ತ್ಯಾಶ್ರಮ** ೧೦೧

ಆವನುದಯದೆ ಜಲವು ವಿಮಲತೆಯನಾಂತುದೊ
ನಹುಷನಾವನ ಕೋಪದುರಿಗೆ ಸಿಲುಕಿ ;
ಸುರರಾಜ ಪದವಿಯಿಂ ಕಳಚಿ ಬಿದ್ದನೊ ಬುವಿಗೆ
ಆ ಮುನಿಪನಾಶ್ರಮಕೆ ನಮಿಸು, ದೇವಿ !

೧೦೨

ಮುನಿಮೌಳಿ ವಿಹರಿಸುವ ಪಂಚಾಪ್ಸರಸೆ ಕೊಳವು
ಬನರಾಜಿಯಿಂ ಕವಿದು ಮುಗಿಲ ಮರೆಯ
ತಿಂಗಳಿನ ತೆರನಂತೆ ಕಂಗೊಳಿಸಿ ಕರೆವುದಾ
ಕಿರುತೆರೆಯ ಕರಗಳಿಂ, ಕೀರವಾಣಿ !

**ಶಾತಕರ್ಣಿ ಋಷ್ಯಾಶ್ರಮ** ೧೦೩

ಎಳೆಗರಿಕೆ ಚಿಗುರುಂಡು ಚಿಗರಿಗಣದೊಡಗೂಡಿ
ಮುನಿಶಾತಕರ್ಣಿ ತಪವೆಸಗುತಿರಲು ;
ಅಪ್ಸರಸೆಯರ ಸೊಬಗ ಬಲೆಹಣಿದು ಬೀಸಿದನು
ಮುನಿವರನ ತಪಕಂಜಿ ಸುರಪನಂದು.

೧೦೪

ಆ ಕೊಳದ ತಳದೊಳಗೆ ಮುನಿರಾಜ ಸೌಧದೊಳು
ಮುರಜಸಂಗೀತ ರವಮುಣ್ಮೆ ನಭದಿ ;
ಪುಷ್ಪಕದ ಮೂಲೆಯೊಳು ಮರುದನಿಯ ನೆರಗಿಸುತೆ
ಮನವಸೆರೆಗೆಯ್ವುತಿಹುದೆಮ್ಮನಿಂದು.

**ಸುತೀಕ್ಷ್ಣ ಋಷ್ಯಾಶ್ರಮ** ೧೦೫

ನಾಲ್ದೆಸೆಯ ಬೆಂಕಿಗಳ ನಡುವಿರ್ದು ಮೊಗವೆತ್ತಿ
ಖರಕಿರಣ ತೇಜಕಿದಿರಾಂತನೀತ ;
ಮತ್ತೋರ್ವಮುನಿಸಿಂಹ ಪೆಸರಿನಿಂ ತೀಕ್ಷ್ಣನಿವ
ಮಿದುಮನದ ಮಹಿತಾತ್ಮ ಕಾಣ್ಬನಿಲ್ಲಿ.

೧೦೬

ಸುರಗಣಿಕೆಯರ ಬೆಡಗು ಕಿರುನಗೆಯ ಕುಡಿನೋಟ
ನೆವದೆ ನಸುದೋರುವಾ ರತಿಕಲೆಗಳು ;
ನಾಣಿಲಿಯ ಸುರಪನುರು ತಪಗೆಡಿಪ ಕಜ್ಜಮದು
ಜಲಹೋಮದೊಲು ವಿಫಲವಾದುದಿಲ್ಲಿ.

**ಶರಭಂಗ ಋಷ್ಯಾಶ್ರಮ** ೧೦೭

ಅಕ್ಷಮಾಲೆಯ ಬಳಿಯ ಚಿಗರಿಗಳ ಮೈದುರಿಪ
ನಲ್ಸಮಿತ್ಕುಶಗಳನು ಕತ್ತರಿಸುವ ;
ಬಲಗೈಯ ಮೇಲೆತ್ತಿ ಗೌರವಿಪ ಮುನಿವರನು
ನಮಿಸಿದೆನ್ನನು ಕಂಡು ಮೌನವಾಗಿ ;

೧೦೮

ಕುಡಿಯೊಡೆದು ಭಕ್ತಿಲತೆ ಸುಳಿಗಾಳಿ ಗಲುಗುವೊಲು
ನಸುಮುಚ್ಚಿ ಕಂಗಳನು ನಲ್ಮೆಯಿಂದೆ;
ತಲೆದೂಗಿ ಮನ್ನಿಸುತೆ ಬಾನ್ದೇರು ಬೇಗದಿಂ
ಮುನ್ನಡೆಯೆ ಮತ್ತಿನನ ದಿಟ್ಟಿಸಿದನು.

೧೦೯

ನೆರಳಿನಿಂ ಬಳಲಿಕೆಯ ನೀಗಿ ತನಿವಣ್ಗಳಂ
ತಿನಲಿತ್ತು ಮರಗಳಿವು ಬನಕೆ ಬರುವ ;
ಅತಿಥಿಗಳ ಸತ್ಕರಿಸಿ ಬೆಳಗುವುವು ದಿನದಿನವು
ಶರಭಂಗಮುನಿಪತಿಯ ಮಕ್ಕಳಂತೆ.

೧೧೦

ನನ್ನ ದರುಶನಕಾಗಿ 'ಬ್ರಹ್ಮಲೋಕವನೊಲ್ಲೆ'
ನೆಂದು ಸುರಪನ ಕರೆಯ ನೂಂಕಿ ಮುದದೆ;
ನಮಗಿತ್ತು ಸಿದ್ಧಿಯನು ಪಾವು ಪೊರೆ ಬಿಡುವಂತೆ
ದಿವ್ಯತೆಯ ಪಡೆದನಾ ಮುನಿಪನಿಲ್ಲಿ.

**ವಿಂಧ್ಯಾಟವಿ**

೧೧೧

ಕಡುಬನದ ಮಧ್ಯದಲಿ ಕಡೆದಿನದ ಯಮನಂತೆ
ನಮ್ಮನುರೆ ಬಳಲಿಸಿ ವಿರಾಧನಿಲ್ಲಿ;
ಮಡಿದೊರಗಿ ತುಂಬುರನ ನಿಜತನುವ ಪಡೆದಿಲ್ಲಿ
ಸೋಜಿಗದ ಸುದ್ದಿಯನು ಪೇಳ್ದುದಿಲ್ಲಿ.

೧೧೨

ಭಾರತಿಯು ಧರಿಸಿರುವ ಪಚ್ಚೆಯೊಡ್ಯಾಣವೆನೆ
ವಿಂಧ್ಯಗಿರಿ ವನಪಙ್ಕ್ತಿ ಕಾಂಬುದೀಗ;
ಮೂಡಪಡು ಕಡಲುಗಳ ಮುತ್ತಿಡುವ ಬನಸಿರಿಯ
ಕರ್ಣಾಟಗಡಿಸೀಮೆ ಬಿಡುತಲಿಹೆವು.

**ಗೌರಿಗುರುಶಿಖರ**

೧೧೩

ಚಾಚಿ ನೀಳ್ದೋಳುಗಳ ಭೂವಧುವನೆದೆಗವಚಿ
ಮುದ್ದಿಸುವ ನಲ್ಲನೊಲು ಮುಗಿಲ ಮುಟ್ಟಿ;
ಕಾಂಬುದದೊ! ದೂರದಲಿ ಗೌರಿಗುರು ಶಿಖರಮದು
ಈ ನಾಡ ಸ್ಫಟಿಕ ಮಣಿಮುಕುಟದಂತೆ.

೧೧೪

ಭಾರತದ ಮುಖಕಮಲ ಸಾಕೇತ ರಾಜ್ಯಮದು
ಅವಳ ವಕ್ಷವೆ ಗಂಗೆ ತಡಿಯ ಬೀಡು;
ತಡವಹುದು ನೋಡುತಿರೆ ಬಳಸಾಯ್ತು ಹಾದಿಯಿದು
ಬೇಗನಡೆ ಬಾನ್ದೇರೆ! ತಳುವದಿನ್ನು.

**ಅತ್ರಿಮುನಿ ಆಶ್ರಮ**

೧೧೫

ಭಯವಿನಿತ ನರಿಯದೆಯೆ ನಯವರಿತ ಮೃಗಕುಲದೆ
ಕುಸುಮಿಸವೆ ಫಲಿಸುವೀ ತರುಗಳಿಂದೆ;
ಅತ್ರಿಮುನಿ ನೆಲೆಸಿರುವ ಪರ್ಣಕುಟಿ ರಾಜಿಪುದು
ಉರುತರವ ಸಿದ್ಧಿಗಳ ಸದನಮೆನಿಸಿ.

೧೧೬

ಪತಿಭಕ್ತಿ ವ್ರತದಿಂದೆ ಮೂದೇವರನು ಮುದದೆ
ಮಕ್ಕಳೊಲು ಸಲಹಿದಾ ಅತ್ರಿಪತ್ನಿ;
ಅನಸೂಯೆ ಹರಸಿಯೆದೆಯೊಲವಿಂದೆ ಸಂತೈಸಿ
ಬೀಳ್ಕೊಟ್ಟ ಬೀಡಿದುವೆ ಮುಗುದೆ! ನಿನ್ನ.

೧೧೭

ಗಾಳಿ ಸುಳಿವಿಲ್ಲದೆಯೆ ಚಲಿಸದಿಹ ಮರಗಳುಂ
ವನಮಧ್ಯವೇದಿಯೊಳು ತಪವನೆಸಗಿ;
ವೀರಾಸನವ ಬಿಗಿದು ಜಾನಿಸುತೆ ಯೋಗದೊಳು
ಮೈಮರೆದ ಮುನಿಗಳೊಲು ಬೆಳಗುತಿಹವು.

**ಚಿತ್ರಕೂಟ**

೧೧೮

ಕೆಸರಿನೊಳು ಗೂರಾಡಿ ಕರ್ಪಿಡಿದ ಕೊಂಬಿನೊಲು
ಮುಗಿಲು ಮುಸುಕಿದ ಗಿರಿಯ ಶಿಖರದಿಂದೆ;
ಜಲಪಾತದಬ್ಬರದೆ ಕೊಬ್ಬಿದಾ ಗೂಳಿಯೊಲು
ಗುಟುರಿಸುತೆ ಮೆರೆವುದೀ ಚಿತ್ರಕೂಟ.

೧೧೯

ಪದ್ಮರಾಗದ ಮಣಿಯು ಬೆರಕೆಯಿಂ ಕಂಗೊಳಿಪ
ಮರಕತದ ರಾಶಿಯೊಲು ಸೊಬಗನಾಂತು;
ಪಸುರೆಲೆಯ ಬುಡಗಳೊಳು ಫಲವಿಡಿದು ರಾಜಿಪುದು
ನೀಂಮೊದಲು ಯಾಚಿಸಿದ ಶ್ಯಾಮವಟವು.

ಮಂದಾಕಿನೀ

೧೨೦

ದೂರಮಿರ್ಪುದರಿಂದೆ ನವುರಾಗಿ ಚಲಿಸದಿಹ
ತಿಳಿನೀರ ಪೂರದಿಂ ಗಿರಿಯ ಬಳಸಿ;
ಭೂಕಾಂತೆ ಕಂಠದೊಳು ಪೊಳೆವ ಮುತ್ತಿನ ಸರವ
ಪೋಲ್ವ ಮಂದಾಕಿನಿಯ ಬೆಡಗ ನೋಡು.

೧೨೧

ಮುಂದೆ ಕಾಂಬುದು ನೋಡು ಜಮುನೆಯೊಡವೆರೆದಿರುವ
ಶುಭ್ರಾಂಗಿ ಗಂಗೆಯಾ ಬಿನದ ಬೀಡು;
ತನ್ನಡಿಯ ಸಾರ್ದವರ ಪಾಪಮಂ ಕಬಳಿಪೊಲು
ಬಿಳಿ ಕರಿಯ ತೆರೆಸಾಲು ಕುಣಿಯುತಿಹುದು.

೧೨೨

ಇಂದ್ರನೀಲಮಣಿಯು ಬೆರೆದ ಮುತ್ತಿನೆಕ್ಕಸರದ ತೆರದೆ,
ಕುಮುದ ವೃಂದದಿಂದೆ ಕಲೆತ ಬಿಳಿಯ ಕಮಲಮಾಲೆಯಂತೆ,
ನೀಲಹಂಸದಿಂದೆ ರಮಿಪ ರಾಜಹಂಸ ಪಙ್ಕ್ತಿಯಂತೆ,
ನೆರಳಿನೊಡನೆ ಸೇರಿ ಮೆರೆವ ಚಂದ್ರಕಿರಣ ಧಾರೆಯಂತೆ,
ನಡುವೆ ನಡುವೆ ಕಾಂಬ ನಭದೆ ಪೊಳೆವ ಬಿಳಿಯ ಮುಗಿಲಿನಂತೆ,
ಕೃಷ್ಣಸರ್ಪ ಭೂಷಕಂಠ ಭಸ್ಮಲಿಪ್ತ ಭವನ ತೆರದಿ,
ಪರಿದು ಬರುವ ಕರ್ಪಿನೊಡಲ ಜಮುನೆ ತೆರೆಗಳಿಂದೆ ಕೂಡಿ,
ಗಂಗೆ ನಗುತೆ ಪರಿಯುತಿಹಳು ನಮಿಸು ನಿರ್ಮಲಾಂಗಿಯವಳ.

೧೨೩

ವನಧಿಯರಸಿಯರಿವರ ಸಂಗಮದೆ ಮಿಂದವರು
ಪೂತಾತ್ಮರಾದಪರ್ ವನಜಗಂಧಿ;
ತನ್ನಿರವನರಿಪುವಾ ತತ್ತ್ವವಬೋಧವನು
ತಿಳಿಯದರ್ ತನುಬಿಡಲು ಮುಕ್ತರಹರು.

**ಶೃಂಗಿಬೇರಪುರ**

೧೨೪

ಗುಹನಿರ್ದ ಪುರವಮೋ ವನಗಮನಕನುವಾಗಿ
ಮುಕುಟಮಣಿ ತೊರೆದಾನು ಜಡೆಯ ಹಣಿಯೆ;
'ಕೈಕೇಯಿ, ನಿನ್ನಿಷ್ಟ ಫಲಿಸಿದುದೆ ?' ಎಂದಿಂತು
ಮಂತ್ರಿವರ ರೋದಿಸಿದ ತಾಣಮಿದುವೆ.

**ಸರಯೂ**

೧೨೫

ನಮ್ಮಯೋಧ್ಯಾಪುರಿಯ ಬಳಿಯಿಂದೆ ಪರಿವುದಮೊ
ತೀರದೊಳು ನಟ್ಟಿರುವ ಯೂಪದಿಂದೆ;
ಅಶ್ವಮೇಧಾವಭೃಥ ಸ್ನಾನಪರಿಪೂತವಹ
ಪುಣ್ಯಜಲದಿಂದೆಸೆವ ಸರಯುವಿದುವೆ.

೧೨೬

ಮರಳುದಿಬ್ಬಗಳಲ್ಲಿ ಮಲಗಿ ಮೈಮರೆದಿರ್ದು
ನಲ್ಮೆಯಿಂ ಜಲವೀಂಟಿ ಬಳೆದ ನಮ್ಮ
ರಘುಕುಲದ ರಾಜರುಪಮಾತೆಯಿವಳನು ನೋಡಿ
ನಮಿಸೆ ಮನ ತವಕಿಪುದು, ಜನಕಪುತ್ರಿ!

೧೨೭

ಪತಿವಿಯೋಗದಿ ಬೆಂದ ಸತಿಯಂತೆ ಸರಯುವಿದು
ನಮ್ಮ ಜನಕನನಗಲಿ ದೀನವಾಗಿ;
ತಂಬೆಲರಿನಿಂದೆಸೆವ ತೆರೆಗೈಯ್ಗಳಿಂದೆನ್ನ
ನಪ್ಪುವುದೊ ತಾನೆನಲು ಕರೆಯುತಿಹುದು.

**ಭರತಾಗಮನ**

೧೨೮

ವನಜಾಕ್ಷಿ ಮುನ್ನೋಡು ಸಂಜೆಗೆಂಪಿನ ಧೂಳಿ
ನಭದೊಳಗೆ ಹರಡುತಿರಲೆನ್ನ ಮನವು;
ಹನುಮಂತನಿಂದೆಮ್ಮ ಬರವರಿದು ಭರತನಮೊ
ಬಲವೊಡನೆ ಬರುವನೆಂದೂಹಿಸುವುದು.

೧೨೯

ಖರದೂಷಣರ ಕೊಂದು ಬಂದೆನಗೆ ಸೌಮಿತ್ರಿ
ನೆರೆ ರಕ್ಷಿಸಿದ ನಿನ್ನ ನಿತ್ತತೆರದಿ;
ಪಿತನಾಜ್ಞೆ ಪಾಲಿಸಿದ ನನಗಿಂದು ನನ್ನನುಜ
ಪರಿಪೂತೆ ಭೂವಧುವನೀವನಲ್ತೆ !

೧೩೦

ಮುಂದಿರಲು ಗುರುಜನರು ಸೈನ್ಯ ಹಿಂಬಾಲಿಸಲು
ನಾರುಡೆಯ ಧರಿಸಿದೀ ದಿವ್ಯಚರಿತ;
ಮಂತ್ರಿಗಳನೊಡಗೂಡಿ ಅರ್ಘ್ಯಾರ್ಚಮನ ವಿಡಿದು
ಬರುವನದೊ ನಡೆಗೆಯೊಳೆ ಭವ್ಯ ಭರತ.

೧೩೧

ತರುಣನಾದರು ಇವನು ತೊಡೆಯೇರಿ ಬಂದಿರ್ದ
ಪಿತನಿತ್ತ ಭೂರಮೆಯ ಭೋಗಿಸದೆಯೆ;
ಇನಿತು ವರ್ಷಗಳವಳ ಜೊತೆಗಿರ್ದು ಭಕ್ತಿಯಿಂ
'ದಸಿಧಾರೆ' ನೋಂಪಿಯನು ನೋಂತ ವೀರ.

೧೩೨

ಎಂದಿಂತು ಪೇಳುತಿರೆ ದಿವಯಾನ ದೇವತೆಯು
ಬಗೆಯರಿದುದೆನೆ ಬುವಿಯ ಸಾರಲಂದು;
ನೆಲಕೆ ಹತ್ತಿರವಾದ ಸೋಪಾನ ವೀಥಿಯನು
ತೋರಿಸೆ ವಿಭೀಷಣನು ವಿನಯದಿಂದೆ;

೧೩೩

ಬಂಧುಜನವಚ್ಚರಿಯ ಸೂಸುತಿರೆ ರಾಘವನು
ಮುದದೆ ನೆಲಕಿಳಿಸುತಲಿ ಜಾನಕಿಯನು;
ಕಪಿರಾಜ ಸುಗ್ರೀವ ಕೈವಿಡಿದು ನಿಂದಿರಲು
ನಸುನಗುತೆ ದಾಶರಥಿ ನೆಲನ ಸಾರ್ದು;

**ಬಂಧು ಸಮಾಗಮ**

೧೩೪

ಕುಲಗುರುವಿನಡಿಗೆರಗಿ ಮಾತೆಯರ ವಂದಿಸುತೆ
ಪುರಜನರ ಮನ್ನಿಸುತೆ ಮರುಕದಿಂದೆ ;
ಭರತನನು ನಲ್ಮೆಯಿಂ ಬಿಗಿಯಪ್ಪಿ ಕಂಬನಿಯ
ಜಲದಿಂದೆ ತೋಯಿಸುತೆ ತಲೆಯ ಮೂಸಿ;

೧೩೫

ಬಿಳಲುಗಳು ಬಿಟ್ಟಿರುವ ವಟತರುವಿನಂತೆಸೆವ
ಮುಖರೋಮದಿಂ ವಿಕೃತರೂಪರಾಗಿ ;
ನಮಿಪ ವೃದ್ಧಾಮಾತ್ಯ ವೃಂದವನು ಕೃಪೆಯಿಂದೆ
ಸಂತೈಸಿ ಕುಶಲಗಳ ಕೇಳಿ ಹರಸಿ ;

೧೩೬

"ಕಷ್ಟದೊಳು ಕೈಗೂರುಗೋಲಿವನು ಕನ್ನಡಿಗ,
ನಲ್ಗೆಳೆಯ ನಿವನೆಮ್ಮ ಲಂಕೆಯರಸ" ;
ಎಂದಿಂದು ರಾಘವನು ಸೂಚಿಸಲು ಭರತನುರೆ
ಜನಕಜೆಯ ಬಿಟ್ಟವರ ವಂದಿಸಿದನು.

೧೩೭

ಹರಿ ಪ್ರಳಯದಿಂ ಬುವಿಯು, ಕಾರ್ಮುಗಿಲಿನಿಂ ಚಂದ್ರ
ಕಲೆಯು ಶರದಾಗಮವು ಕಾವ ತೆರದಿ ;
ಅಣ್ಣನಿಂ ದಶಶಿರನ ಸೆರೆಯಿಂದೆ ಬಿಡುಗಡೆಯ
ಪಡೆದ ಸತಿ ಜಾನಕಿಗೆ ಭರತ ನಮಿಸೆ ;

೧೩೮

ರಾವಣನ ವಂದನೆಯ ಧಿಕ್ಕರಿಸಿ ಸದ್ವ್ರತವ
ಪಾಲಿಸಿದ ಮೈಥಿಲಿಯ ಪಾದಯುಗಲ ;
ರಾಮನೊಲು ಜಡೆಬಳೆದ ಭರತಶಿರವೊಂದೆನಲು
ಅನ್ಯೋನ್ಯಪಾವನತೆ ಬೀರುತಿಹವು.

೧೩೯

ಇಂದ್ರಜಿತ್ ಶರಹತಿಯ ವ್ರಣಕಠಿನವಕ್ಷದಿಂ
ತನ್ನಂಗಗಳ ಪೀಡಿಸುವನೊ ಎನಲು ;
ನಮಿಸುತಿಹ ಸೌಮಿತ್ರಿಯೆಡೆಗೈದಿ ಭರತಮುನಿ
ನಲ್ಮೆಯಿಂ ಪಿಡಿದೆತ್ತಿ ಅಪ್ಪುತಿರಲು.

೧೪೦

ಪರ್ಬಿದಾ ತರು ಮುರಿಯೆ ದೈನ್ಯದಿಂ ಪರಿತಪಿಸಿ
ಬಾಡಿರ್ದ ಬಳ್ಳಿಯೊಲು ಬಳಲುತಿರುವ ;
ಮಾತೆಯರ ಬಳಿಗೈದಿ ಮರುಕದಿಂದಡಿಗೆರಗಿ –
ದಣುಗರನು ಮುದದೆತ್ತಿ ಮುದ್ದಿಪಂದು :

೧೪೧

ಕಂಬನಿಯು ತುಂಬಿಬರೆ ಮುಂಗಾಣದಿರೆ ಮರುಗಿ
ಯುಮ್ಮಳದೆ ಕೊರಲುಬ್ಬಿ ದನಿತಡೆಯಲು ;
ಮೈಗಾಯ ಮಾಯುವೊಲು ಮೈದಡವಿ ಮೌನದಿಂ
ತಾಯ್ಗರುಳು ತನಿವಂತೆ ತೊನೆದರಂದು.

೧೪೨

“ಹಠಮಾರಿ, ದುಃಖಾರ್ತೆ ಕನಿಕರಿಸಿ” ರೆಂದೆನುತೆ
ಕಾಲ್ಗೆರಗೆ ಜಾನಕಿಯ ಕರುಣದಿಂವೆ ;
“ಏಳಮ್ಮ ಪರಿಪೂತೆ, ನಿನ್ನಮಲ ಸತಿನೇಮ
ರಕ್ಷಿಸಿತು ಮಕ್ಕಳನು ರಕ್ಷೆಯಂತೆ”

೧೪೩

“ಪತಿಭಕ್ತಿವ್ರತಖಡ್ಗಧಾರೆಯಿಂ ಖಳನಳಿಯೆ
ಸತಿಕುಲದ ಚಿರಕೀರ್ತಿ ಬೆಳಗಿಸಿರುವೆ”
ಎಂದೆನುತೆ ನಲ್ಸೊಸೆಯ ಬಗೆಯೊಪ್ಪೆ ಬಿಗಿಯಪ್ಪಿ
ಕಂಬನಿಯ ನೊರಸುತಲಿ ನಲಿಯುತಿರಲು ;

೧೪೪

ಬಳಿಗೈದಿ ಭಕ್ತಿಯಲಿ ತಲೆಸೆರೆಗನೋಸರಿಸಿ
ಅಡಿಗೆರಗಿದೂರ್ಮಿಳೆಯ ಕಂಡು ಮುದದಿ;
ಪಿಡಿದೆತ್ತಿ ಜಾನಕಿಯು ತಕ್ಕೈಸಿ ತಂಗಿಯನು
ಕಂಬನಿಯನೊರೆಸುತಲಿ ನುಡಿದಳಿಂತು.

೧೪೫

" ಪದಿನಾಲ್ಕು ಬರಿಸಗಳು ಪತಿಭಕ್ತಿಯೋಗದಲಿ
ತನುತೆತ್ತ ಚಿರತಪಸ್ವಿನಿಯು ನೀನು ;
ನಿನ್ನ ಪುಣ್ಯದ ಬಲದೆ ನನ್ನ ಬಂಧ ವಿಮುಕ್ತಿ
ನಿನ್ನ ಸಿದ್ಧಿಯೊಳಾನು ಶುದ್ಧಳಾದೆ.

೧೪೬

" ಮನವ ಜಯಿಸಿದೆ ನೀನು ರಣಕಾಹುತಿಯು ನಾನು
ಕರ್ಮಯೋಗಿನಿ ಧರ್ಮದೇವಿ ನೀನು ;
ಧರ್ಮಕರ್ಮಗಳತುಲ ಸಂಯೋಗ ಸಾಧಿಸುತೆ
ಜೀವನದ ಚಿರಶಾಂತಿ ಪಡೆದೆ, ಸಾಧ್ವಿ !

೧೪೭

" ನಿನ್ನಿನಿಯ ಚಿರಕಾಲ ತನ್ನ ಹಿತ ಮರೆದೆಮಗೆ
ಜೀವಿತವನರ್ಪಿಸುತೆ ಸೇವೆಯೆಸಗಿ ;
ಹರುಷಚಿತ್ತದೊಳೆಮ್ಮ ಸಂತೈಸಿ ಸಾಹಸದೆ
ಪರಿಚರ್ಯೆಗೈದ ಸದುವಿನಯದಿಂದೆ.

೧೪೮

" ಪತಿಗುಚಿತಸಾಧನೆಯ ಪಥವಿಡಿದು ತಪವೆಸಗಿ
ಪರಿಪೂತೆ ತಂಗಿ ! ನೀಂ ಪುಣ್ಯಚರಿತೆ !
ನಿನ್ನ ಗೆಲುವಿದೆ ಚೆಲುವು ನಿನ್ನೊಲವನೀಡೆಂ "ಬ
ಅಕ್ಕನಿನಿವಾತುಗಳ ನಾಲಿಸುತಲಿ.

೧೪೯

ಮೌನದಲಿ ತಲೆವಾಗಿ ನಿಂದಿರ್ದ ಇನಿಯಳನು
ನಸು ನಗುತೆ ಲಕ್ಷ್ಮಣನು ಕರೆದು ಮುದದೆ ;
ಮಾತೆಯರ ನೊಡಗೂಡಿ ಬಾನ್ದೇರ ನಡರಿಸಲು
ದಿವಯಾನ ಮೆಲುನಡೆದು ಸಾಗುತಿರಲು ;

೧೫೦

ಸಂಜೆಯೊಳು ಸೆಳೆಮಿಂಚ ಕಾರ್ಮುಗಿಲನಡರಿರುವ
ಬುಧಗುರುಗಳೊಡವೆರೆದ ಚಂದ್ರನಂತೆ ;
ಬೆಳಗುತಿಹ ಬಾವುಟದ ಕಾಮಗತಿಯಾನದಲಿ
ರಾಘವನು ಅನುಜರೊಡಗೂಡಿ ನಡೆಯೆ ;

೧೫೧

ರಾಮಾಜ್ಞೆಯಿಂದೆಲ್ಲ ಕಪಿವರರು ಸಿಂಗರದೆ
ಮುಂದೆ ಮದ್ದಾನೆಗಳನೇರಿ ಮುದದೆ ;
ಮದಧಾರೆ ಮಳೆಯಂತೆ ಸುರಿಯುತಿರೆ ಗಿರಿಶಿಖರ
ನೇರಿದೊಲು ಮುದದಿಂದೆ ನಡೆದರವರು.

೧೫೨

ರಕ್ಕಸರ ಮಾಯೆಯಿಂ ರಚಿಸಿದಾ ರಥಗಳನು
ಮಿಾರಿಸುವ ವರರಥಗಳೇರಿ ಮೆರೆವ ;
ಪ್ರಭುಭಕ್ತಿಯಿಂ ದನುಜಮುಖ್ಯರೊಡಗೂಡಿರುವ
ಲಂಕಾಧಿಪತಿಯಂದು ಶೋಭಿಸಿದನು.

೧೫೩

ಪುರಜನಗಳೊಡಗೂಡಿ ಮೆಲುನಡೆವ ಪುಷ್ಪಕದೆ
ರಾಘವನು ಹರಿದಾರಿ ನಡೆದು ಮುಂದೆ ;
ಶತ್ರುಘ್ನ ರಚಿಸಿರ್ದ ಸಾಕೇತದುದ್ಯಾನ
ಪಟಭವನ ಸ್ವಾಗತವ ಮನ್ನಿಸಿದನು.

ರಾಮರಾಜ್ಯ

೧೫೪

ಗುರುಜನರ ಸಂತೋಷಬಾಷ್ಪದಿಂ ರಾಘವನಿ
ಗಭಿಷೇಕದುತ್ಸವವು ನಡೆಯುತಿರಲು ;
ಮಿಸುನಿಕೊಡಗಳ ತರಿಸಿ ಪುಣ್ಯಜಲದಭಿಷೇಕ
ಮುಗಿಸಿದರು ಮಂತ್ರಿವರಮುಖ್ಯರಂದು.

೧೫೫

ಮುತ್ತೈದೆಯರು ಮುದದೆ ಛತ್ತ್ರದರಳನು ಬೀರೆ
ಸುರನಿಕರ ಪೂಮಳೆಯ ಗರೆಯುತಿರಲು ;
ಹರುಷದಿಂ ಹಸುಳೆಯರ ಜಯಘೋಷವೇಳುತಿರೆ
ಸುರದುಂದುಭಿಯು ನಭದೆ ಮೊಳಗಿತಂದು.

* * * *

ಸಾಕೇತಕಾಗಮಿಸಿ ಸೋದರರನೊಡಗೂಡಿ
ಸೀತಾವಿನೋದ ರಘುರಾಮನೊಲಿದು ;
ಸತ್ಯಧರ್ಮವ ಪಿಡಿದು ಸಲಹಿದನು ಸಕಲರನು
ಸಿರಿರಾಮರಾಜ್ಯವರಿದೆನಲು ಜಗದಿ.

ನಲ್

# ಶಬ್ದಕೋಶ

| ಪದ್ಯ | ಪದ | ಅರ್ಥ |
|---|---|---|
| ೧ | ಕವಿಸೇನೆ | ಕವಿ = ಪಂಡಿತ, ಸುಸಂಸ್ಕೃತ<br>ಕವಿಸೇನೆ = ವ್ಯವಸ್ಥಿತ ಸೈನ್ಯ |
| ೩ | ಬಾನ್ದೇರು | (ಬಾನ್+ತೇರು) ವಿಮಾನ |
| | ಮುಗಿಲಮಾರ್ಗ | ಮೇಘಸಂಚಾರ ಮಾರ್ಗ |
| | ಮುನ್ನೀರು | ಸಮುದ್ರ |
| | ಸುಟ್ಟಿಸು | ಬೆರಳು ಮಾಡಿ ತೋರಿಸು |
| ೪ | ಛಾಯೆಪಥ | ಛಾಯಾಪಥ (ತತ್ಸ) ರಾತ್ರಿಯ ಹೊತ್ತು ತಾರೆಗಳ ನಡುವೆ ಅಡ್ಡವಾಗಿ ಕಾಣುವ ಬೆಳಕಿನ ಸಾಲು |
| | ನೊರೆಯುಂಡೆ | ಉಂಡುಂಡೆಯಾಗಿ ನೀರಿನಲ್ಲಿ ತೇಲುವ ನೊರೆ |
| ೫ | ನೀರಬಸಿರಾಂಪುದು | ಬಸಿರೊಳಾಂಪುದು (ಕ್ರಿ. ಸ.) ಮೇಘವು ರವಿ ಕಿರಣಗಳಿಂದ ನೀರು ಹೀರಿ ಗರ್ಭ ಧರಿಸುವುದು |
| ೬ | ಹರಿವರಿಸಿದಿಳೆವಧು | ಹರಿ+ವರಿಸಿದ+ಇಳೆಯೆಂಬ ವಧು (ಭೂದೇವಿ) |
| | ಮದುವೆಯ ಪರದೆ | ವರಾಹಮೂರ್ತಿ ಭೂಮಿಯನ್ನು ರಸಾತಳದಿಂದ ತರುವಾಗ ಭೂಮಿಗೂ ವಿಷ್ಣುವಿಗೂ ನಡುವೆ ಸಮುದ್ರದ ನೀರು ತೆರೆ (ಕಾಂಡಪಟ) ಯಂತಿತ್ತು. |
| ೭ | ತಿಮಿ | ತಿಮಿಂಗಿಲ; ಇದು ಸಮುದ್ರದಲ್ಲಿ ನೀರನ್ನು ಬಾಯಿಗೆಳೆದು ತಲೆಯಮೇಲಿನ ರಂಧ್ರದಿಂದ ಬುಗ್ಗೆಯಂತೆ ಚಿಮ್ಮುತ್ತದೆ. |
| ೮ | ಜಲಮಥನ | ಸಮುದ್ರಮಥನ |
| ೯ | ಕಾರ್ಬೊನ್ನು | ಕಬ್ಬಿಣ |
| ೧೦ | ಮುಖಮಂಡನ | ಮುಖಕ್ಕೆ ಮಾಡುವ ಅಲಂಕಾರ |

| ಪದ್ಯ | ಪದ | ಅರ್ಥ |
|---|---|---|
| ೧೨ | ಸುರಸರಣಿ | ದೇವಮಾರ್ಗ, ಬಹಳ ಮೇಲಿನ ಆಕಾ ಪ್ರದೇಶ |
| | ಖಗಪಥ | ಪಕ್ಷಿಗಳು ಹಾರುವ ಗಗನಪ್ರದೇಶ |
| ೧೩ | ಮಿಂಚಿನೆಳೆ ಬಳೆ | ಮಿಂಚಿನ ಎಳೆಗಳೆಂಬ ಬಳೆಗಳು |
| ೧೯ | ಏಕಾವಳೀ | ಒಂದೆಳೆಯ ಹಾರ |
| ೩೧ | ಅಜ ಕಮಂಡಲ | ಬ್ರಹ್ಮನ ಕಮಂಡಲ |
| ೩೪ | ಬಾನ್ದೆರೆ | ಬಾನಿನ + ತೆರೆ = ಮೋಡ |
| ೩೯ | ರುಮೆ | ಸುಗ್ರೀವನ ಕಿರಿ ಹೆಂಡತಿ |
| ೪೫ | ಗಂಗೆಪಾಣಿ | ಆಪ್ಯಾಯಮಾನವಾದ ಎಳೆನೀರು |
| ೫೦ | ನರೆದಲೆಗ | ರಾಗಿಯ ಹಿಂದಿನ ಹೆಸರು<br>ಶ್ರೀರಾಮನು ಸುಗ್ರೀವಾದಿಗಳೊಡನೆ ಕನ್ನಡ ನಾಡಿನಲ್ಲಿ ಸಂಚರಿಸುತ್ತಿದ್ದಾಗ ನರೆದಲೆಗ ಮತ್ತು ನೆಲ್ಲು ಧಾನ್ಯಗಳಿಗೆ ವಿವಾದ ನಡೆದು ರಾಮನಲ್ಲಿಗೆ ತೀರ್ಪಿಗೆ ಹೋದವು. ರಾಮನು ಎರಡನ್ನೂ ಪರೀಕ್ಷಿಸಿ ನರೆದಲೆಗವನ್ನು ಮೆಚ್ಚಿ ಅದಕ್ಕೆ ತನ್ನ ಹೆಸರಿಟ್ಟನು. ಅದರಿಂದ 'ರಾಘವ ಧಾನ್ಯ, ರಾಮಧಾನ್ಯ, ರಾಗಿ' ಎಂಬ ಹೆಸರುಗಳು ರೂಢಿಗೆ ಬಂದವು. (ರಾಮಧಾನ್ಯ ಚರಿತೆ – ಕನಕದಾಸ) |
| ೫೭ | ಸಾಕೇತ | ಅಯೋಧ್ಯಾನಗರ |
| ೫೮ | ವಂಜುಲ | ನೀರುಹಬ್ಬೆಗಿಡ |
| ೫೯ | ಮೊಲೆಗೊಂಚಲು | ಮೊಲೆಯಂತಿರುವ ಗೊಂಚಲು (ಉ. ಪೂ. ಕ.) |
| | ಅಸುಗೆಲತೆ | ಅಶೋಕಲತೆ |
| ೬೦ | ಕೋಕ | ಚಕ್ರವಾಕಪಕ್ಷಿ |
| ೬೬ | ನೀಪಸುಮ | ಈಚಲ ಹೂವು |
| ೭೭ | ಕವಡುನುಡಿ | "ಹಾ! ಲಕ್ಷ್ಮಣಾ!!" ಎಂಬ ಕಪಟೋಕ್ತಿ |
| ೮೮ | ಜನದಾಣ | ಜನಸ್ಥಾನ |

| ಪದ್ಯ | ಪದ | ಅರ್ಥ |
|---|---|---|
| ೯೦ | ಬೆಸಲಾಗು | ಬಸುರಿಯಾಗು |
| ೯೩ | ಪಳಿವಾತು | ವೇದ ಋಕ್ಕು |
| ೯೫ | ಕಾದಲೆ | ಪ್ರೇಯಸಿ |
| ೧೦೫ | ಖರಕಿರಣ | ಸೂರ್ಯ |
| ೧೦೬ | ನಾಣಿಲಿ | ನಾಣ್ + ಇಲ್ಲದವ = ನಿರ್ಲಜ್ಜ, ನಾಚಿಕೆಯಿಲ್ಲದವ |
| ೧೨೨ | ಎಕ್ಕಸರ | ಏಕಾವಳೀ, ಒಂದೆಳೆ ಹಾರ |
| ೧೨೫ | ಯೂಪ | ಯಜ್ಞಸ್ತಂಭ |
| | ಅವಭೃಥಸ್ನಾನ | ಯಜ್ಞದ ಕಡೆಯಲ್ಲಿ ಮಾಡುವ ಕರ್ಮಾಂಗವಾದ ಸ್ನಾನ |
| ೧೩೮ | ಸದ್ವ್ರತ | ಪಾತಿವ್ರತ್ಯ |
| ೧೩೯ | ಇಂದ್ರಜಿತ್ ಶರಹತಿಯ ವ್ರಣ ಕಠಿಣ ವಕ್ಷ | ಇಂದ್ರಜಿತ್ತುವಿನ ಬಾಣಾಘಾತದಿಂದಾದ ಗಾಯಗಳಿಂದ ಕಾಯಿಗಟ್ಟಿದ ಲಕ್ಷ್ಮಣನ ಎದೆ |
| ೧೪೦ | ಪರ್ಬಿದ | ಹಬ್ಬಿರುವ |
| ೧೫೦ | ಕಾಮುಗತಿಯಾನ | ಇಚ್ಛೆಗೆ ಅನುಸಾರವಾಗಿ ಹೋಗುವ ವಿಮಾನ |

## ಇದೇ ಲೇಖಕರ ಇತರ ಕೃತಿಗಳು

ಶಿವನ ಸೋಲು (ಗೀತ ನಾಟಕ)

ಜೀವಜ್ಯೋತಿ

ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರೀ (ಜೀವನ–ಕೃತಿವಿಮರ್ಶೆ)

ವೈದಿಕ ವಾಙ್ಮಯ ಚರಿತ್ರೆ

ಅರ್ಜುನ ವಿಜಯ

### ಸಂಪಾದಿತ

ಇಷ್ಟಲಿಂಗ ವಿಜ್ಞಾನ

ರೇಣುಕ ವಿಜಯ (ಬಸವಪ್ಪಶಾಸ್ತ್ರಿ ಕೃತ)

ಸಂಸ್ಕೃತ ಕೃತಿಪಂಚಕ „

೧. ತ್ರಿಷಷ್ಠಿಗಣಸ್ತವ

೨. ಶಿವಭಕ್ತಿ ಸುಧಾತರಂಗಿಣೀ

೩. ಆರ್ಯಾಶತಕ

೪. ಅಂಬಾ ಷೋಡಶಮಂಜರೀ

೫. ಶಿವಾಷ್ಟಕ

ಮುಂದಿನ ಪ್ರಕಟನೆ

## ವೃಷಭಪೂಜೆಯ ಇತಿಹಾಸ